# ಅಪರಂಜಿ

ತಿಳಿನಗೆಯ ಕಾರಂಜಿ



## ಬೆಳ್ಳಿ ಹಬ್ಬದ ವರ್ಷ

## ಹಾಸ್ಯೋತ್ಸವ ವಿಶೇಷಾಂಕ

ಜನವರಿ - 2009






ಬಿಡಿ ಪ್ರತಿ: ರೂ. 20.00

# ಅಪರಂಜಿ

ತಿಳಿನಗೆಯ ಕಾರಂಜಿ





ಸಂಪುಟ 26
ಸಂಚಿಕೆ - 4
ಜನವರಿ - 2009



ಚಂದಾ ವಿವರ:
ಬಿಡಿ ಪ್ರತಿ: ರೂ. 10/-
ವಾರ್ಷಿಕ ಚಂದಾ: ರೂ. 100/-
ಹತ್ತು ವರ್ಷದ ಚಂದಾ: ರೂ. 750/-
ಕೆಲಸದ ವೇಳೆ:
ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ
ಮುದ್ರಣ: ರವಿ ಗ್ರಾಫಿಕ್ಸ್
ಅಕ್ಷರ ಜೋಡಣೆ
ಒಮೇಗಾ ಲೇಸರ್ ಟೆಕ್

## ಈ ಸಂಚಿಕೆಯಲ್ಲಿ.....



ಪ್ರಕಾಶಕರು: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ,
ಬೆಂಗಳೂರು - 560 003. email: aparanji@hotmail.com

ಸಂಪರ್ಕ ವಿಳಾಸ: ಶ್ರೀ ಬೇಲೂರು ರಾಮಮೂರ್ತಿ, ಉಪ ಸಂಪಾದಕರು, ಅಪರಂಜಿ ಮಾಸಪತ್ರಿಕೆ,
ನಂ. 96, 'ಸುಕೇಶವ' ಎರಡನೇ ಅಡ್ಡರಸ್ತೆ, 20ನೇ ಮುಖ್ಯರಸ್ತೆ, ಮೊದಲನೇ ಫೇಸ್, ಬಿ.ಟಿ.ಎಂ. ಲೇಔಟ್,
ಬೆಂಗಳೂರು - 560 068. ದೂರವಾಣಿ: 808-26688488. email: brmurthy@dataone.in

## ನಮ್ಮ ನಿಮ್ಮಲ್ಲಿ

ಪೂಜ್ಯ ಜಿ.ಪಿ.ರಾಜರತ್ನಂ ಅವರ 'ಬುದ್ಧನ ಕತೆಗಳು' ಎಂಬ ಪುಸ್ತಕದಲ್ಲಿ ಭಗವಾನ್ ಬುದ್ಧನ ಪೂರ್ವ ಜನ್ಮಗಳ ಕತೆಗಳನ್ನು ತಿಳಿಸುವ 'ಜಾತಕ' ಗಳ ಪ್ರಸಂಗಗಳಲ್ಲಿ ಒಂದು ಹೀಗಿದೆ.

ಒಮ್ಮೆ ಶಾಕ್ಯವಂಶದವರಾದ ಕಪಿಲವಸ್ತುವಿನವರಿಗೂ ಕೋಲೀಯನಗರದವರಿಗೂ, ಎರಡೂ ನಗರಗಳ ನಡುವೆ ಹರಿಯುತ್ತಿದ್ದ ರೋಹಿಣಿ ನದಿಯ ನೀರಿನ ಬಗ್ಗೆ ಕಲಹ ಉಂಟಾಯಿತಂತೆ. ಸಣ್ಣದಾಗಿ ಪ್ರಾರಂಭವಾದ ಕಲಹ ಕೊನೆಗೆ ಎರಡೂ ರಾಜ್ಯಗಳು ಯುದ್ಧಕ್ಕೆ ಸನ್ನದ್ಧರಾಗುವ ಸ್ಥಿತಿಗೆ ಮುಟ್ಟಿತು.

ಆ ಸಮಯದಲ್ಲಿ ಭಗವಂತನು ಶ್ರಾವಸ್ತಿಯಲ್ಲಿ ವಿಹರಿಸುತ್ತ, ಬೆಳಗಿನ ಜಾವದಲ್ಲಿ ಲೋಕವನ್ನು ಅವಲೋಕಿಸುತ್ತ ಇವರು ಹೀಗೆ ಯುದ್ಧಕ್ಕೆ ಸಜ್ಜಾಗಿ ಹೊರಡುವುದನ್ನು ಕಂಡನು. ಕಂಡು, 'ನಾನು ಹೋದರೆ ಈ ಕಲಹ ನಿಲ್ಲುವುದು. ಇಲ್ಲದಿದ್ದರೆ ಇಲ್ಲ.' ಎಂದು ನಿಶ್ಚಯಮಾಡಿ ಎರಡು ಸೇನೆಗಳ ನಡುವೆ ರಮಣೀಯವಾದ ಪ್ರದೇಶದಲ್ಲಿ ಮರಳು ದಿಣ್ಣೆಯ ಮೇಲೆ ಸಿದ್ಧಗೊಳಿಸಿದ ವರಬುದ್ಧಾಸನದಲ್ಲಿ ಅನುಪಮವಾದ ಬುದ್ಧಶ್ರೀಯಿಂದ ವಿರಾಜಿಸುತ್ತ ಕುಳಿತನು. ಎರಡೂ ಕಡೆಯ ರಾಜರು ಭಗವಂತನಿಗೆ ವಂದಿಸಿ ಕುಳಿತರು.

ಆಗ ಗುರು ತನಗೆ ತಿಳಿದರು ಕೂಡ, 'ಇಲ್ಲೇಕೆ ಬಂದಿರುವಿರಿ ಮಹಾರಾಜರೆ?' ಎಂದನು.

ಅವರು 'ಭನ್ತೇ, ನದಿಯನ್ನು ನೋಡುವುದಕ್ಕಾಗಲಿ, ಕ್ರೀಡೆಗಾಗಲೀ ಅಲ್ಲ, ಇಲ್ಲಿ ಯುದ್ಧಕ್ಕಾಗಿ ಬಂದಿದ್ದೇವೆ.' ಎಂದರು.

'ಯಾವುದಕ್ಕಾಗಿ ನಿಮಗೆ ಕಲಹ, ಮಹಾರಾಜರೆ?'

'ನೀರಿಗಾಗಿ, ಭನ್ತೇ.'

'ನೀರಿನ ಬೆಲೆ ಎಷ್ಟು, ಮಹಾರಾಜರೆ?'

'ಅಲ್ಪ ಭನ್ತೇ'

'ನೆಲದ ಬೆಲೆ ಎಷ್ಟು ಮಹಾರಾಜರೆ?'

'ಅದು ಅನರ್ಘ ಭನ್ತೇ.'

'ಕ್ಷತ್ರಿಯರ ಬೆಲೆ ಎಷ್ಟು ಮಹಾರಾಜರೆ?'

'ಕ್ಷತ್ರಿಯರು ಅನರ್ಘರು ಭನ್ತೇ'

'ಅಲ್ಪ ಬೆಲೆಯ ನೀರಿಗಾಗಿ ಹೆಚ್ಚು ಬೆಲೆಯ ಕ್ಷತ್ರಿಯರನ್ನು ಏಕೆ ನಾಶ ಮಾಡುವಿರಿ ಮಹಾರಾಜರೆ?'

ರಾಜರುಗಳು ಅದನ್ನು ಕೇಳಿ ಪ್ರಸನ್ನರಾಗಿ 'ಗುರು ಬಾರದೆ ಇದ್ದಿದ್ದರೆ ನಾವು ಒಬ್ಬರನ್ನೊಬ್ಬರು ಕೊಂದು ರಕ್ತದ ಹೊಳೆಯನ್ನು ಹರಿಸಿಬಿಡುತ್ತಿದ್ದೆವು. ಗುರುವಿನಿಂದ ನಾವು ಬದುಕಿದೆವು' ಎನ್ನುತ್ತ ಯುದ್ಧಮಾಡದೆ ಹಿಂದಕ್ಕೆ ತೆರಳಿದರಂತೆ.

ಭಗವಾನ್ ಬುದ್ಧ ಜನಿಸಿದ ಹೆಗ್ಗಳಿಕೆಯನ್ನು ಹೊಂದಿರುವ ನಮ್ಮ ಈ ಭೂಖಂಡದಲ್ಲಿ ಇಂದು ನಾವು ಕಾಣುತ್ತಿರುವ ಅನಗತ್ಯ ಕ್ರೌರ್ಯಕ್ಕೆ ಅಲ್ಪವಾದ ನೀರಿನಷ್ಟೂ ಕಾರಣ ಗೋಚರಿಸುತ್ತಿಲ್ಲ. ಕ್ರೌರ್ಯದಿಂದ ಕುದಿಯುತ್ತಿರುವ ಈ ಮನಗಳಿಗೆ ಭಗವಾನ್ ಬುದ್ಧನ ಸರಳ ಹಿತವಚನ ಸಾಂತ್ವನ ನೀಡಲಿ, ಶಾಂತಿ ನೆಲಸಲಿ ಎಂದು ಅಪರಂಜಿ ಮಂಡಿಯೂರಿ ಪ್ರಾರ್ಥಿಸುತ್ತಾಳೆ.

- **ಶಿವಕುಮಾರ್**

## ಅಭಿನಂದನೆಗಳೊಂದಿಗೆ



## ಅಪರಂಜಿಯ ಅಭಿಮಾನಿ




○ ಪ್ರಕಾಶ್

ಹೊಗೇನಕಲ್ ನಮ್ಮದು – ಕರುಣಾನಿಧಿ

ಓಹೋ ಇದು ಇನ್ನೂ ಹೊಗೆಯಾಡುತ್ತಿದೆ !

★★★

'ಮುಂಬೈ' ತನಿಖೆಯಲ್ಲಿ ಭಾರತಕ್ಕೆ ಸಹಕಾರ – ಜರ್ದಾರಿ

ಅದು ಸಹಖಾರ ಆಗದಿದ್ದರೆ ಸಾಕು !

★★★

ಭದ್ರತಾ ಲೋಪ; ದೋನಿ ಕೋಪ – 'ಕ್ರೀಡಾ' ಸುದ್ದಿ

**"Dhoni was stumped!"** ಅಂತ ಅಪರಂಜಿ ನಕ್ಕಳಂತೆ!

★★★

ಭವಿಷ್ಯನಿಧಿ ಕಛೇರಿ ಸ್ಥಳಾಂತರಿಸಿ – ಆಗ್ರಹ

ಇದರ ಭವಿಷ್ಯ ಏನಾಗುತ್ತೋ ಕಾದು ನೋಡಬೇಕು!

★★★

ಕೊನೆಗೂ ಪೆಟ್ರೋಲ್ ಬೆಲೆ ಇಳಿಕೆ – ಪತ್ರಿಕೆ

ಅಯ್ಯೋ, ನಿನ್ನೆಯೇ 20 ಲೀಟರ್ ಕೊಂಡೆನಲ್ಲಾ!!

★★★

ರೈತರಿಗೆ ಸಾಲ ನೀಡುವಲ್ಲಿ 200 ಕೋಟಿ ರೂ. ದುರುಪಯೋಗ – ಸುದ್ದಿ

ಬೇಲಿಯೇ ಹೊಲ ಮೇಯ್ದಂತೆ !!

★★★

ಪಾಳಿ ನೌಕರರಿಗೆ ಅಧಿಕ ಮಧುಮೇಹ ಸಾಧ್ಯತೆ – ಸುದ್ದಿ

ನನಗಂತೂ ಇದರ ಭಯವಿಲ್ಲ ಅಂತ ಸೋಮಾರಿ ಸೋಮಣ್ಣ
ಮುಸುಕೆಳೆದುಕೊಂಡನಂತೆ !

★★★

ಜಾಗೃತ ಮತದಾರ; ಪಾಠ ಕಲಿಯದ ರಾಜಕಾರಣಿ – ಶೀರ್ಷಿಕೆ

ಇದು ಭಾರತದ ಅಖಂಡ ಪರಂಪರೆ !!

★★★

'ವೈದ್ಯನೇ ರೋಗಿಯ ಬಳಿ ಬರಬೇಕೆಂಬ ನಿರೀಕ್ಷೆ ಸಲ್ಲ' – ಹೇಳಿಕೆ

ಹೌದು, ಅದು ಅಪಾಯಕರ !!

★★★

# ಭಗವದ್ಗೀತೆ - 2009

**- ಲೀಲಾ ಮಿರ್ಲೆ**

ಮೊನ್ನೆ ಗೆಳತಿ ಉಷಳ ಫೋನ್ ಬಂತು. "ಈ ಭಾನುವಾರ ಸಂಜೆ ಸ್ವಾಮಿ ಮಹದಾನಂದರ ಭಾಷಣ ಇದೆ. ತುಂಬಾ ಚೆನ್ನಾಗಿರತ್ತಂತೆ. ನಾನು ಹೋಗ್ತಾ ಇದೀನಿ. ನೀನೂ ಬಾ" ಎಂದ್ಲು. "ಭಾಷಣ ಎಂದ್ರೆ ಬೋರು, ಅದರಲ್ಲೂ ಯಾವುದೊ ಸ್ವಾಮಿಗಳದ್ದು. ನನ್ನನ್ನ ಯಾಕೆ ಪೀಡಿಸ್ತಿಯಾ" ಅಂದೆ. "ಅವರು ಲೆಕ್ಚರ್ ಕೊಡೋದೇ ಇಲ್ವಂತೆ. ಗೀತೆಯಲ್ಲಿ ನಮಗೆ ಅರ್ಥವಾಗದ ವಿಷಯಗಳನ್ನು ಕೇಳಿದ್ರೆ, ತುಂಬ simple ಆಗಿ ವಿವರಿಸ್ತಾರಂತೆ. ನಮ್ಮ ಯಜಮಾನರ ಆಫೀಸಿನಲ್ಲಿರುವ ಸುರೇಶ್ ಹೇಳಿದ್ರು" ಎಂದ್ಲು. "ಅಲ್ವೆ, ನನಗೆ ಗೀತೆಯ popular ಶ್ಲೋಕಗಳಲ್ಲಿ ಅಲ್ಲೊಂದು ಇಲ್ಲೊಂದು ಮಾತ್ರ ಗೊತ್ತು. ನಾನು ಅಲ್ಲಿ ಹೋಗಿ ಏನ್ ಕೇಳಲಿ" ಎಂದೆ. "ನಂಗೂ ಏನೂ ಗೊತ್ತಿಲ್ಲ. ಹೋದವರೆಲ್ಲಾ ಪ್ರಶ್ನೆಗಳನ್ನ ಕೇಳಲೇಬೇಕು ಅನ್ನೊ ಬಲವಂತವೇನಿಲ್ಲ. ಅಧ್ಯಯನ ಮಾಡಿರುವವರು ಅನೇಕರಿರ್ತಾರೆ. ಆ ಪ್ರಶ್ನೋತ್ತರಗಳನ್ನು ಕೇಳಿ ನಾವು ಎಷ್ಟೊ ತಿಳಿದುಕೊಬೋದು" ಎಂದೆಲ್ಲಾ ಬಲವಂತಪಡಿಸಿದಳು.

ಸರಿ, ಭಾನುವಾರ ಸಂಜೆ ನನಗೂ ಏನೂ ಕೆಲಸವಿರಲಿಲ್ಲ. ಹಾಗೂ ಉಷಳನ್ನು ಸಂತೋಷಪಡಸಲು ಕಾರ್ಯಕ್ರಮವನ್ನು attend ಮಾಡಲು ಒಪ್ಪಿದೆ.

ಭಾನುವಾರ ಸಂಜೆ ಭಾಷಣಕ್ಕೆ ಹೋದೆವು. ಸುಮಾರು ಜನ ಸೇರಿದ್ದರು. 6 ಘಂಟೆಗೆ ಸರಿಯಾಗಿ ಸ್ವಾಮೀಜಿಗಳು ಬಂದರು. ಯಥಾಪ್ರಕಾರ ಆತ ಆಧುನಿಕ corporate ಸ್ವಾಮಿಗಳ ಗುಂಪಿಗೆ ಸೇರಿದ ಮಹಾಪುರುಷರೆಂದು ನೋಡಿದ ಕೂಡಲೇ ತಿಳಿಯಿತು. ರೇಶಿಮೆಯ ಬಿಳಿ ಪೈಜಾಮ ಜುಬ್ಬ, ಎರಡು ಪುಟ್ಟ ಹಕ್ಕಿಗಳು ಒಂದು ಚಿಕ್ಕ ಗೂಡು ಕಟ್ಟುವಷ್ಟು ದೊಡ್ಡ ಗಡ್ಡ, ಕೈಯಲ್ಲಿ ಫಳಫಳಿಸುವ ಬಂಗಾರದ ಗಡಿಯಾರ. ಕೊರಳಿನಲ್ಲಿ ಚಿನ್ನದಲ್ಲಿ ಸುತ್ತಿಸಿದ ರುದ್ರಾಕ್ಷಿ ಮಾಲೆ. ಅಂತು ಒಟ್ಟಿನಲ್ಲಿ interesting personality ಅನ್ನಿಸ್ತು.

ಸ್ವಾಮೀಜೀಗಳು ವೇದಿಕೆಯನ್ನು ಅಲಂಕರಿಸಿದರು. ವೇದಿಕೆ ಮೇಲೆ ಹಾಸಿದ್ದ ಬಣ್ಣ ಹೋದ ಜಮಖಾನದ ಮೇಲಿಟ್ಟಿದ್ದ ಹಳೇ ಕುರ್ಚಿ ಮೇಲೆ ಆತ ಕುಳಿತಾಗ ನಿಜವಾಗಲು ವೇದಿಕೆಯನ್ನು ಅಲಂಕರಿಸಿದಂತೆಯೇ ಆಯ್ತು ಅನ್ನಿ!

ಕಾರ್ಯಕ್ರಮವನ್ನು ಏರ್ಪಡಿಸಿದ ಸಂಘದವರು ಸ್ವಾಮಿ ಮಹದಾನಂದರನ್ನು ಸ್ವಾಗತಿಸಿ, ಪರಿಚಯ ಮಾಡಿಕೊಟ್ಟರು.

"ಸ್ವಾಮೀಜಿಯವರು ನಮ್ಮ ವೇದೋಪನಿಷತ್ತುಗಳ ಆಳವಾದ ಅಧ್ಯಯನ ಮಾಡಿದ್ದಾರೆ. ಭಗವದ್ಗೀತೆಯಂತೂ ಇವರಿಗೆ ಕರತಲಾಮಲಕ. ಗೀತೆಯನ್ನು ಕೇವಲ ಓದಿ ಅರ್ಥಮಾಡಿಕೊಂಡಿರುವುದಲ್ಲದೆ, ಅದರ ಸಂದೇಶವೇ ಇವರ ಜೀವನದ ಮಾರ್ಗದರ್ಶನವೂ ಆಗಿದೆ. ಲೆಕ್ಕವಿಲ್ಲದಷ್ಟು ಸಲ ಇವರು ಪ್ರಪಂಚ ಪರ್ಯಟನೆ ಮಾಡಿದ್ದಾರೆ" ಎಂದೆಲ್ಲಾ ಹೇಳಿ ಅವರ ಪರಿಚಯ ಮಾಡಿಕೊಟ್ಟರು.

ಮಹದಾನಂದರು ಸಭಿಕರಿಗೆ ತಲೆಬಾಗಿ ನಮಸ್ಕರಿಸಿ ಕೈ ಮುಗಿದಾಗ, ಕೈಗಡಿಯಾರದ ವಜ್ರಗಳು ಫಳಫಳಿಸಿದವು. "ಮಹನೀಯರೇ ಮತ್ತು ಮಹಿಳೆಯರೇ, ಭಗವದ್ಗೀತೆಯ ಪ್ರಸಾರವನ್ನು ನಾನು ಮಾಡುವ ರೀತಿಯೇ ಬೇರೆ. ನಿಮಗೆ ಅರ್ಥವಾಗದಿರುವ ಅಥವಾ ಸಂಶಯವನ್ನು ತಂದಿರುವ ಯಾವುದಾದರೂ ಶ್ಲೋಕವಿದ್ದರೆ, ಅದನ್ನು ಕೇಳಿ. ನಾನು ಆದಷ್ಟು ಸರಳವಾಗಿ ವಿವರಿಸುತ್ತೇನೆ. ಸಾಮಾನ್ಯವಾಗಿ ಸಾಧು, ಸಂತರು ತಮ್ಮಲ್ಲಿ ತುಂಬಿ ತುಳುಕುತ್ತಿರುವ ಜ್ಞಾನ ಭಂಡಾರವನ್ನು ಎಲ್ಲರೊಂದಿಗೂ ಹಂಚಿಕೊಳ್ಳುವ ಸಂಭ್ರಮದಲ್ಲಿ, ಉದ್ದುದ್ದಾ ಭಾಷಣಗಳನ್ನು ಬಿಗಿದು ಬೋರ್ ಹೊಡಿಸುತ್ತಾರೆ. ಇಂತಹ ಸಂದರ್ಭದಲ್ಲಿ ಪ್ರೇಕ್ಷಕರು ನಿಜವಾಗಿ ಮೂಕ ಪ್ರೇಕ್ಷಕರೇ! ಭಾಷಣದುದ್ದಕ್ಕೂ ಸುಮ್ಮನೆ ಕುಳಿತಿದ್ದು, ಈ ಕಿವಿಯಿಂದ ಕೇಳಿದ್ದನ್ನು ಆ ಕಡೆ ಕಿವಿಯಿಂದ ಬಿಟ್ಟು, ತಲೆಗೆ ಏನೂ ಹಚ್ಚಿಕೊಳ್ಳದೆ ಹೊರಡುತ್ತಾರೆ. ಇದರಿಂದ ಪ್ರಯೋಜನವಾದರೂ ಏನು? ನನ್ನ ರೀತಿಯೇ ಬೇರೆ. ನನ್ನ ನಿಮ್ಮ ನಡುವೆ ಗೀತಾ ವಾಕ್ಯಗಳ ಬಗ್ಗೆ dialogue ನಡೆದರೆ ಮಾತ್ರ, ಶ್ಲೋಕದ ಅಂತರಾರ್ಥ ನಿಮ್ಮ ಮನಃಪಟಲದ ಮೇಲೆ ಶಾಶ್ವತವಾಗಿ ಮೂಡುತ್ತದೆ. ಅರ್ಥವಾಯಿತಲ್ಲವೇ. ಸರಿ, ಶುರುಮಾಡಿ ಎಂದು ಹೇಳಿ ಕುರ್ಚಿಯಲ್ಲಿ ಕುಳಿತರು.

ಭಾಷಣ ಬಿಗಿಯಲ್ಲವಲ್ಲ ಸಧ್ಯ, ಎಂದು ನಿಟ್ಟುಸಿರು ಬಿಟ್ಟೆ. ನನಗೆ ಆತನ ರುದ್ರಾಕ್ಷಿ ಸರದ ಮೇಲೇ ಕಣ್ಣು. ಬಿಳಿ ರೇಶಿಮೆಯ ಮೇಲೆ ಚಿನ್ನದಲ್ಲಿ ಸುತ್ತಿಸಿದ ರುದ್ರಾಕ್ಷಿ ತುಂಬಾ ಆಕರ್ಷಕಾಗಿ ಕಾಣುತ್ತಿತ್ತು. ಸಣ್ಣ ರುದ್ರಾಕ್ಷಿ ಮಣಿಯನ್ನ ಚಿನ್ನದಲ್ಲಿ ಸುತ್ತಿಸಿ ಹಾಕಿಕೊಂಡರೆ ತುಂಬ fashion ಆಗಿ ಕಾಣುತ್ತೆ ಅನ್ನಿಸ್ತು. ಎಷ್ಟು ಚಿನ್ನ ಹಿಡಿಸುತ್ತೊ ಎಂದು ಯೋಚಿಸುತ್ತಿದ್ದಾಗ, ಸಭಿಕರಲ್ಲೊಬ್ಬರು ಕೈ ಎತ್ತಿದರು. "ಗೀತೆಯ 4ನೇ ಅಧ್ಯಾಯದ ಒಂದು ಶ್ಲೋಕದ ಸಾರಾಂಶ "ಜ್ಞಾನದ ಬೆಳಕಿನಿಂದ ಪಾಪಿಯೂ ಪಾಪರಹಿತನಾಗುತ್ತಾನೆ" ಎಂದಿದೆ. ಸ್ವಲ್ಪ ವಿವರಿಸುತ್ತೀರಾ" ಎಂದ್ರು.

"ಹಾ, ಇದು ನನ್ನ ಮೆಚ್ಚಿನ ಶ್ಲೋಕಗಳಲ್ಲಿ ಒಂದು. ನೋಡಿ ನಮ್ಮ ಸ್ವಭಾವಗಳಿಂದಾಗಿ, ನಮಗೆ ತಿಳಿಯದೇ ನಾವು ಅನೇಕ ಹೀನ ಕೃತ್ಯಗಳನ್ನು ಮಾಡುತ್ತೇವೆ. ಆಯ್ತು. ಆದರೆ ಪಾಪಿಗಳೂ ಬದುಕಬೇಕಲ್ಲವೆ. ಜ್ಞಾನದ ದೆಸೆಯಿಂದ ಅವನು ಪಾಪದಿಂದ ಪಾರಾಗುತ್ತಾನೆ. ಅಂದರೆ, ಮಾಡಿದ ತಪ್ಪಿನಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂಬ ತಿಳುವಳಿಕೆ, ಜ್ಞಾನ ಅವನಿಗೆ ಬರಬೇಕು. ಆಗ ಕಷ್ಟದಿಂದ ಪಾರಾಗುವ ಮಾರ್ಗ ಅವನಿಗೆ ಹೊಳೆಯುತ್ತದೆ. ಪಾಪ ಮಾಡುವುದು ಮನುಷ್ಯನ ಸಹಜ ಗುಣ. ಹೀನ ಕಾರ್ಯ ಮಾಡಿ, ಅಜ್ಞಾನದಿಂದ ಸುಮ್ಮನೆ ಕುಳಿತರೆ ಲಾಕಪ್ಪೆ ಗತಿ. ಅದರ ಬದಲು ತಲೆ ಉಪಯೋಗಿಸಿ ತೊಂದರೆಯಿಂದ

ಪಾರಾಗುವುದಕ್ಕೆ ಜ್ಞಾನ ಅಥವಾ ತಿಳುವಳಿಕೆ ಅವಶ್ಯಕ. ಇಷ್ಟೇ ಈ ಶ್ಲೋಕದ ಗೂಢಾರ್ಥ'' ಎಂದ್ರು.

ಸ್ವಾಮೀಜಿಗಳ ಮಾತು ಕೇಳಿ, ನನಗೆ ಯಾಕೊ ಉಸಿರು ಸಿಕ್ಕಿಹಾಕಿಕೊಂಡ ಹಾಗಾಯ್ತು. ಅಷ್ಟರಲ್ಲಿ ಇನ್ನೊಬ್ಬ ಮಹನೀಯರು ಎದ್ದು ನಿಂತು ''ನನ್ನ ಪ್ರಶ್ನೆಯನ್ನು ಕೇಳಿ, ಸ್ವಾಮೀಜಿಯವರು ತಪ್ಪು ಭಾವಿಸಬಾರದು. ಹೊರಗೆ ನಿಂತಿರುವ ನಿಮ್ಮ Benz Car ತುಂಬ ಚೆನ್ನಾಗಿದೆ. ತ್ಯಾಗಮಯಿಗಳಾದ ತಮಗೆ ಇಂತಹ ಕಾರುಗಳ ಅವಶ್ಯಕತೆಯಾದರೂ ಏನು, ತಿಳಿಸುತ್ತೀರಾ'' ಎಂದು ಧೈರ್ಯವಾಗಿ ಕೇಳಿಯೇಬಿಟ್ಟರು.

ಶ್ರೀರಾಮ ರಕ್ಷೆ! ವಿಷಯ interesting ಆಗ್ತಾ ಇದೆ. ಬಂದದ್ದು ಒಳ್ಳೇದೇ ಆಯ್ತು, ಎಂದುಕೊಂಡೆ.

''ತುಂಬಾ ಒಳ್ಳೆಯ ಪ್ರಶ್ನೆ. ಇದಕ್ಕೂ ಗೀತೆಯಲ್ಲಿ ಉತ್ತರವಿದೆ.

ಪತ್ರಂ, ಪುಷ್ಪಂ, ಫಲಂ, ತೋಯಂ
ಯೋ ಮೆ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತಮ್
ಅಶ್ನಾಮಿ ಪ್ರಯತಾತ್ಮನಹ ॥

''ಭಕ್ತರು ಕೇವಲ ಒಂದು ಪತ್ರವೊ, ಪುಷ್ಪವೊ, ಫಲವೊ ಏನೊಂದಾದರೂ ಸರಿಯೇ, ಭಕ್ತಿಯಿಂದ ಅರ್ಪಿಸಿದರೆ ನಾನು ಅದನ್ನು ಸ್ವೀಕರಿಸ್ತೇನೆ'' ಎಂದಿದ್ದಾನೆ ಶ್ರೀಕೃಷ್ಣ ಪರಮಾತ್ಮ. ನಾನು ಹಾಗೆಯೇ. ನನ್ನ ಅನುಯಾಯಿಗಳು ಏನು ಕೊಟ್ಟರೂ ಅವರ ಮನಸ್ಸನ್ನು ನೋಯಿಸದಿರಲು, ನಾನು ಅದನ್ನು ಸಂತೋಷವಾಗಿ ಸ್ವಿಕರಿಸುತ್ತೇನೆ. ಅವರು ಯಾವ ಕಾರ್ ಕೊಡುತ್ತಾರೊ ಅದರಲ್ಲಿ ಓಡಾಡುತ್ತೇನೆ. ಈ ಪ್ರಾಪಂಚಿಕ ವಸ್ತುಗಳು ಜೀವನದಲ್ಲಿ ತುಂಬ ಅಮುಖ್ಯ. ಇವತ್ತು Benz, ನಾಳೆ BMW, ನಾಡಿದ್ದು Rolls Royee ಯಾವುದಾದರೆ ಏನು! ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಲು ಅನುಕೂಲವಾಗುವ ವಸ್ತು ಇದು ಅಷ್ಟೆತಾನೆ'' ಎಂದು ತಲೆತೂಗಿದರು.

ಅಬ್ಬಾ, ಶಹಭಾಸ್! ಧಿಡೀರ ಪ್ರಶ್ನೆಗೆ ಧಿಡೀರ್ ಉತ್ತರ! ಶ್ರೀಕೃಷ್ಣನು ಈ ವಿವರಣೆಯನ್ನು ಕೇಳಿದರೆ ಭಗವದ್ಗೀತೆಯನ್ನೇ withdraw ಮಾಡಿಕೊಂಡು ಬಿಡ್ತಾನೇನೊ ಎನ್ನಿಸ್ತು. ಫಲ ಪುಷ್ಪಗಳಿಂದಲೇ ಸಂತೃಪ್ತಗೊಂಡ ಆ ಕೃಷ್ಣನಿಗಿಂತ ಈ ಮರಿ ಕೃಷ್ಣಗಳು ತುಂಬಾ ಮುಂದುವರಿದಿದ್ದಾರೆ ಎನಿಸಿತು!

ಗೀತೆಯ ಶ್ಲೋಕಗಳಿಗೆ ಗಂಭೀರವಾದ ಅರ್ಥಗಳನ್ನು ತಿಳಿದುಕೊಳ್ಳುವುದಕ್ಕಿಂತ, ಈ ವಿಭಿನ್ನವಾದ ವಿವರಣೆಯನ್ನು ಕೇಳಲು ಜನರು ಕುತೂಹಲಗೊಂಡಂತೆ ತೋರಿತು ಹಲವಾರು ಜನರು ಕೈ ಎತ್ತಿದರು.

''ಯಾ ನಿಶಾ ಸರ್ವ ಭೂತಾನಾಂ, ತಸ್ಯಾಂ ಜಾಗರ್ತಿ ಸಂಯಮಿ''

''ಈ ವಾಕ್ಯಕ್ಕೆ ನಿಮ್ಮ ವಿವರಣೆ ಏನು, ಸ್ವಾಮೀಜಿ'' ಎಂದು ಅಲ್ಲಿದ್ದ ಹಿರಿಯರೊಬ್ಬರು ಕೇಳಿದರು.

"ಎಲ್ಲರಿಗೂ ಕತ್ತಲೆಯಾದಾಗ ಜ್ಞಾನಿಗೆ ಎಚ್ಚರವಾಗಿರುತ್ತದೆ, ಬೆಳಕು ಕಾಣುತ್ತದೆ" ಎಂದರ್ಥ. ಜನರು ನನ್ನನ್ನು "ಅಂದರೆ ಜ್ಞಾನಿಗೆ ನಿದ್ದೆ ಬರದೇ, ಆತನಿಗೆ insomnia ಖಾಯಿಲೆಯೆ ಎಂದೆಲ್ಲಾ ಕೇಳುತ್ತಾರೆ. ಛೆ. ಎಲ್ಲಾದರೂ ಉಂಟೆ. ನಮಗೆ ಗೋಚರವಾಗದ್ದು ಆತನಿಗೆ ಗೋಚರವಾಗುತ್ತದೆ. ಉದಾಹರಣೆಯೊಂದಿಗೆ ವಿವರಿಸುತ್ತೇನೆ. ಕೇಳಿ. ನೀವು ಕೆಲಸ ಹುಡುಕಿಕೊಂಡು ಹೋಗುತ್ತೀರ. ಆಫೀಸಿನ ಮುಂದಿನ ಬಾಗಿಲ ಮೇಲೆ "No vacancy" board ಹಾಕಿರುತ್ತಾರೆ. ಮುಖ ಚಿಕ್ಕದು ಮಾಡಿಕೊಂಡು ಮನೆಗೆ ಹಿಂತಿರುಗುವುದು ನಮ್ಮ ನಿಮ್ಮ ಜಾಯಮಾನ. ಅಂದರೆ ಅಜ್ಞಾನಿಗಳಾದ ನಮಗೆ ಕಾಣುವುದು ಮುಂದಿನ ಬಾಗಿಲು ಒಂದೇ. ಆದರೆ ಜ್ಞಾನಿಯೊಬ್ಬ ಅಲ್ಲಿಗೆ ಹೋದರೆ, buildingಗೆ ಮುಂದೆ ಮತ್ತು ಹಿಂದೆ, ಹೀಗೆ ಎರಡು ಬಾಗಿಲುಗಳಿರುತ್ತದೆ ಎನ್ನುವುದನ್ನು ಆತ ಅರಿತಿರುತ್ತಾನೆ. ಮುಂದಿನ ಬಾಗಿಲ 'No vacancy' Board ನೋಡಿದ ಕೂಡಲೆ, ಹಿಂದಿನ ಬಾಗಿಲ ಬೆಳಕು ಅವನನ್ನು ಸ್ವಾಗತಿಸುತ್ತದೆ. ಹಿಂದಿನ ಬಾಗಿಲನ್ನು ಪ್ರವೇಶಿಸಿ, ಅಲ್ಲಿ ಕೆಲಸ ಕೊಡುವ ಹಿರಿಯ ದೇವರು, ಕಿರಿಯ ದೇವರುಗಳು ಯಾರೆಂದು ಪತ್ತೆಹಚ್ಚಿ ಅವರುಗಳಿಗೆ ಷೋಡಶೋಪಚಾರಗಳನ್ನು ಸಲ್ಲಿಸಿ, ಕೆಲಸ ಗಿಟ್ಟಿಸಿ, ಹಸನ್ಮುಖನಾಗಿ ಮನೆಗೆ ಹಿಂತಿರುಗುತ್ತಾನೆ. ಇದೇ ಜ್ಞಾನಿಗೂ, ಅಜ್ಞಾನಿಗೂ ಇರುವ ವ್ಯತ್ಯಾಸ.

ಮೊದಲನೆ ಕ್ಲಾಸ್ ಪಾಸ್ ಮಾಡಿದರೆ ತಾನೆ ಎರಡನೆ ಕ್ಲಾಸ್‌ಗೆ ಹೋಗಿ ಅಲ್ಲಿ ಪಾಸ್ ಮಾಡಲು ಸಾಧ್ಯ. ಹಾಗೆಯೇ, ಇಹದ ಕಾರ್ಯಗಳಲ್ಲಿ ಗೆದ್ದರೆ, ಪರದಲ್ಲಿ ಜಯಗಳಿಸಲು ಸಾಧ್ಯ" ಎಂದು ಅರ್ಥವಾಗುವಂತೆ ಸ್ವಾಮೀಜಿಗಳು ವಿವರಿಸಿದರು.

ಈ ಸ್ವಾಮೀಜಿಗಳ ವ್ಯಾಖ್ಯಾನ ತುಂಬ ಸ್ವಾರಸ್ಯಕರವಾಗಿ ಕಂಡಿತು ನನಗೆ. ನಮ್ಮಂಥ ಸೀದಾ ಸಾದ ಮನುಷ್ಯರು ಈತನಿಂದ ಕಲಿಯುವುದು ಬೇಕಾದಷ್ಟಿದೆ ಎನ್ನಿಸಿತು.

ಈ ಪೂಜ್ಯ ಮಹನೀಯರ ತಂಡ ದಿನದಿನಕ್ಕೆ ಹೆಚ್ಚುತ್ತಿದೆ. ನಮ್ಮ ಮಕ್ಕಳು Engineering, Medicine ಅಂತ Seatಗೆ ಹೆಣಗಾಡಿ, ಹಗಲು ರಾತ್ರಿ ದುಡಿದು ಸಂಪಾದಿಸುವ ಬದಲು, ಈ ಪೂಜ್ಯರ ಗುಂಪಿಗೆ ಸೇರಿದರೆ ಸಲೀಸಾಗಿ ಜೀವನ ನಡೆಸಬಹುದು. 21ನೇ ಶತಮಾನದಲ್ಲಿ ಸ್ವಾಮೀಜಿಯಾಗುವುದೂ ಒಂದು career ಆಗುತ್ತದೆ ಎಂದು ನನ್ನ ನಂಬಿಕೆ. ದೊಡ್ಡ ಸ್ವಾಮೀಜಿಯಾಗಿ Benz Car ಸಿಗದಿದ್ದರೂ, ಮರಿ ಸ್ವಾಮಿಯಾಗಿ Maruthi ಸಿಕ್ಕರೂ ಸಾಕು. ಊಟ ತಿಂಡಿಗೆ ಯೋಚನೆ ಇರದು. ಈಗಿನ ಟಿಕೇಟು ಬೆಲೆಗಳಲ್ಲಿ ಬೆಂಗಳೂರಿಂದ ಮೈಸೂರಿಗೆ ಹೋಗುವುದಕ್ಕೂ ಯೋಚಿಸಬೇಕು. ಈ ಕಸುಬಿನಲ್ಲಿ ಪ್ರಪಂಚ ಪರ್ಯಾಟನೆ ನೀರು ಕುಡಿದ ಹಾಗೆ. 'ಮಾತು ಬಲ್ಲವ ಮಾಣಿಕ್ಯ ತಂದ' ಎನ್ನುವ ಗಾದೆಯ ಸತ್ಯಾಂಶ ಈಗ ನನಗೆ ಅರಿವಾಯಿತು.

ಕಾರ್ ಬಗ್ಗೆ ಪ್ರಶ್ನೆ ಕೇಳಿದ ಮಹನೀಯನಿಗೆ ಇನ್ನೂ ತುಂಬ ಸಂಶಯಗಳಿದ್ದವು. ಆತ

"ಯದಾ ಯದಾ ಹಿ ಧರ್ಮಸ್ಯ, ಗ್ಲಾನಿರ್ಭವತಿ ಭಾರತ" ಎನ್ನುವ ಶ್ಲೋಕದಲ್ಲಿ, ಶ್ರೀಕೃಷ್ಣನು, ಅಧರ್ಮವು ಹೆಚ್ಚಾದಾಗ, ಧರ್ಮ ಸಂಸ್ಥಾಪನೆಯನ್ನು ಮಾಡಲು ನಾನು ಅವತರಿಸುತ್ತೇನೆ ಎಂದಿದ್ದಾನೆ. ಈ ನಮ್ಮ ಕಲಿಯುಗದಲ್ಲಿ ಅನೇಕ ಸ್ವಾಮಿಗಳು ಅಧರ್ಮವನ್ನು

ತಡೆಗಟ್ಟಲು ಹವಣಿಸುತ್ತಿರುವಾಗ, ಯಾರು ಶ್ರೀಕೃಷ್ಣನ ಅವತಾರವೆಂದು ಹೇಗೆ ತಿಳಿಯುತ್ತದೆ" ಎಂದು ಕೇಳಿಯೇಬಿಟ್ಟರು.

"ಸಹಜವಾದ ಪ್ರಶ್ನೆ ಇದು. ಈ ಪ್ರಶ್ನೆಗೆ ಉತ್ತರ ತೀರ ಸರಳ. ದ್ವಾಪರ ಯುಗದಲ್ಲಿ ಅನ್ಯಾಯಗಳನ್ನು ಹದಬಸ್ತಿಗೆ ತರಲು, ಒಬ್ಬ ಕೃಷ್ಣ ಸಾಕಾಗಿದ್ದ. ಈಗ ಜಗತ್ತಿನಲ್ಲಿ ತುಂಬಿರುವ ದುಷ್ಕೃತ್ಯಗಳನ್ನು ತಡೆಗಟ್ಟಲು ಒಬ್ಬ ಕೃಷ್ಣ ಸಾಕೇ. ಖಂಡಿತ ಸಾಲದು. ಹಾಗಾಗಿ ನನ್ನಂತಹ ಹಲವಾರು ದೇವದೂತರ ಅವಶ್ಯಕತೆ ಉಂಟಾಗಿ, ನಾವಿಲ್ಲಿ ನಿಮ್ಮ ಸೇವೆಯಲ್ಲಿ ತೊಡಗಿದ್ದೇವೆ" ಎಂದರು.

ಅಷ್ಟರಲ್ಲಿ ಸಡನ್ನಾಗಿ ದೀಪ ಆರಿತು. 10 ನಿಮಿಷವಾದರೂ ದೀಪ ಬರಲಿಲ್ಲ. ಉಷಾ, ನಾನೂ ಬೇಗ ಬಸ್ ಆದರೂ ಹಿಡಿಯೋಣವೆಂದು ಹೊರಗೆ ಬಂದೆವು.

ಅಂತೂ ಮಹದಾನಂದರ ಅಪೂರ್ವ ವ್ಯಾಖ್ಯಾನವನ್ನು ಇನ್ನೂ ಸ್ವಲ್ಪ ಹೊತ್ತು ಕೇಳಬಹುದಾಗಿತ್ತು. ಈತ ಭಗವದ್ಗೀತೆಗೆ ಈ ವಿಭಿನ್ನವಾದ ವ್ಯಾಖ್ಯಾನವನ್ನು ಬರೆದು ಪ್ರಕಟಿಸಿದರೆ, ಹಾಸ್ಯ ಗ್ರಂಥಗಳ ವಿಭಾಗದಲ್ಲಿ award ಬಂದರೂ ಬರಬಹುದು ಅಲ್ಲವೇ!



ಕೊರವಂಜಿಯಿಂದ



ನಾನು ಹಿಂದೀ ಸಿನಿಮಾದಲ್ಲಿ ಹೀರೋ ಪಾರ್ಟ್ ಮಾಡಬೇಕು ಅಂತಿದೀನೋ ಅದಕ್ಕೇ.

# ಕಬಡಿಗೊಂದಿಷ್ಟು ಕಾಯಕಲ್ಪ

**-ಆನಂದ**

ರೋಲ್ ಮಾಡಲ್‌ಗಳಾಗಿ ಎಂದರೆ ಮಾಡಲ್‌ಗಳಾದರು ಎಂದು ನಮ್ಮ ಕ್ರಿಕೆಟಿಗರ ಬಗ್ಗೆ ಜನ ಟೀಕಿಸಿದ್ದನ್ನು ನೀವು ಕೇಳಿದ್ದಿರಲೂಬಹುದು. ಅದಕ್ಕೆ ಕಾರಣವಿದೆ. ಏಕೆಂದರೆ ಒಂದಾನೊಂದು ಕಾಲದಲ್ಲಿ – ಅಂದರೆ ತೀರ ಇತ್ತೀಚಿನವರೆಗೆ – ನಮ್ಮ ದೇಶದ ಉತ್ಪನ್ನಗಳನ್ನು ಪ್ರಚುರಪಡಿಸಲು ಕಂಪನಿಗಳು ಪ್ರೊಫೆಷನಲ್ ಮಾಡಲ್‌ಗಳನ್ನು ಅಥವಾ ಸಿನಿಮಾ ತಾರೆಯರನ್ನು ಮಾತ್ರ ಬಳಸುತ್ತಿದ್ದವು. ಈಗ ಅವರ ಜಾಗವನ್ನು ನಮ್ಮ ಕ್ರಿಕೆಟಿಗರು ಆಕ್ರಮಿಸಿಕೊಂಡಿದ್ದಾರೆ. ಈ ಮಂದಿ ಎಷ್ಟು ಬ್ಯುಸಿ ಎಂದರೆ 24 ತಾಸುಗಳ ಅವಧಿಯಲ್ಲಿ ಅವರು ನೆಟ್ ಪ್ರಾಕ್ಟೀಸ್ ಮತ್ತು ಜಾಹೀರಾತು ಶೂಟಿಂಗ್ ಸೇರಿದಂತೆ ಪಾರ್ಟಿ/ಮನೆ/ ಸಮಾರಂಭಗಳಲ್ಲಿ ಹಾಜರಿ – ಹೀಗೆ ಹಲವಾರು ಕಾರ್ಯಕ್ರಮಗಳಿಗೆ ಸಮಯ ನಿಗದಿ ಮಾಡಿಕೊಳ್ಳಬೇಕಾಗಿದೆ. ಇಬ್ಬರು ಜನಪ್ರಿಯ ಬ್ಯಾಟ್ಸ್‌ಮನ್‌ಗಳು ಬ್ಯಾಟಿಂಗ್ ಮಾಡುವಾಗ ಪಿಚ್ ಮೇಲೆ ಆಗಾಗ ಮಾತು ವಿನಿಮಯ ಮಾಡಿಕೊಳ್ಳುವಾಗ ಅವರು ಬ್ಯಾಟಿಂಗ್ ಸ್ಟ್ರಾಟಿಜಿ ಬಗ್ಗೆ ಮಾತನಾಡುತ್ತಾರೋ ಅಥವಾ ಸಂಜೆ/ನಾಳೆಯ ಶೂಟಿಂಗ್ ಬಗ್ಗೆ ಮಾತನಾಡುವರೋ ಎಂಬುದರ ಬಗ್ಗೆ ನನಗೆ ನನ್ನದೇ ಆದ ಅನುಮಾನಗಳಿವೆ!

ಐವತ್ತರ ದಶಕದಲ್ಲಿ ಟೆಸ್ಟ್ ಆಡುತ್ತಾ ಇಡೀ ಐದು ದಿನಗಳ ಕಾಲ ಪಂದ್ಯಕ್ಕೆ ಒಂದು ಭವ್ಯವಾದ 750 ರೂ. ಸಂಭಾವನೆ ಪಡೆಯುತ್ತಿದ್ದ ಪಂಕಜ್‌ರಾಯ್, ಗುಪ್ತೆ, ಅಮರನಾಥ್‌ಗಳಂತೆ ಇಂದು ನಮ್ಮ ಹಾಕಿ/ಫುಟಬಾಲ್ ಆಟಗಾರರು ದೇಶಕ್ಕಾಗಿ ಆಡುತ್ತಿದ್ದಾರೆ. ಆದರೆ ಇಂದಿನ ಪಂಕಜ್‌ರಾಯ್, ಗುಪ್ತೆ, ಅಮರನಾಥ್‌ಗಳು ಕೋಟಿಗಟ್ಟಲೆ ಹಣ ಎಣಿಸುತ್ತಿದ್ದರೆ ಇತರ ಕ್ರೀಡೆಗಳ ಆಟಗಾರರು ಬರೀ ಬೆವರು ಇಳಿಸುವುದೇ ಆಗಿದೆ. ಪೂರ್ ಹಾಕಿ/ಫುಟ್‌ಬಾಲ್ ಆಟಗಾರರನ್ನಂತೂ ಕೇಳುವವರೇ ಇಲ್ಲ.

ಇಂತಹ ಪರಿಸ್ಥಿತಿಯಲ್ಲಿ ಶೇ. 100ರಷ್ಟು ಅಪ್ಪಟ ನಮ್ಮದೆ ಆದ ಸ್ವದೇಶಿ ಕಬಡ್ಡಿಯನ್ನು ಕೇಳುವವರು ಯಾರು? ಲಾರ್ಡ್ ಹನುಮಂತ ರಾಯನೇ ಹಗ್ಗ ಕಡಿಯುತ್ತಿದ್ದರೆ ಪೂಜಾರಿ ನೂಡಲ್ಸ್ ಕೇಳಿದ ಎನ್ನುವಂತೆ ಹಾಕಿ/ಫುಟ್‌ಬಾಲ್ ಆಟಗಾರರೇ ಬರಿಗೈ ಮಾಡಿಕೊಂಡಿರುವಾಗ – ಗೋಲ್‌ಗಳ ವಿಷಯದಲ್ಲಲ್ಲ, ಸಂಭಾವನೆ ವಿಷಯದಲ್ಲಿ – ಇನ್ನು ಕಬಡ್ಡಿ ಮಂದಿಯನ್ನು ಯಾರು ಕೇರ್ ಮಾಡುತ್ತಾರೆ ಹೇಳಿ ನೋಡುವಾ?

ಆದರೂ ನಮ್ಮ ಸ್ವದೇಶಿ ಕಬಡ್ಡಿಗೆ ಒಂದಿಷ್ಟು ಕಾಯಕಲ್ಪ ಮಾಡುವುದಾದರೆ ಒಂದು

ಆಟವನ್ನು ಉಳಿಸಿ, ಪ್ರೋತ್ಸಾಹಿಸಿದಂತಾಗುತ್ತದೆ. ಇದಕ್ಕಾಗಿ ಕ್ರಾಂತಿಕಾರಿಯಾಗಿ ಯೋಚಿಸಬಹುದು. ಹೇಗೆಂದಿರಾ? ಈಗ ನೋಡಿ ಕಬಡ್ಡಿ ಆಟದ ಸಮಯದಲ್ಲಿ ಆಟಗಾರರು – ಅಂದರೆ ಎರಡೂ ತಂಡದವರು – ಕಬಡಿ, ಕಬಡಿ ಎಂದು ಒಂದೇ ಮಂತ್ರವನ್ನು ಜಪಿಸುತ್ತಾರೆ. ಅದರ ಬದಲು ಒಂದು ತಂಡವನ್ನು ಒಬ್ಬ ಉತ್ಪಾದಕರು ಪ್ರಾಯೋಜಿಸಿದರೆ ಆಟಗಾರರು ಆಟದ ಸಮಯದಲ್ಲಿ ಕಬಡಿ ಕಬಡಿ ಎನ್ನುವ ಬದಲು ಒಂದು ಪ್ರಾಡಕ್ಟಿನ ಹೆಸರನ್ನು ಹೇಳತೊಡಗಿದರೆ?

ಪ್ರಾಯೋಜಕರು ಎಂದರೆ ತಟ್ಟನೆ ಹೊಳೆಯುವುದು ಕೋಕಾಕೋಲಾ ಕಂಪನಿ ತಾನೆ? ಅವರಿಲ್ಲದಿದ್ದರೆ ನಮ್ಮ ಟೀವಿ ಕಂಪನಿಗಳು ಅದೆಷ್ಟು ನಷ್ಟ ಅನುಭವಿಸಬೇಕಾಗಿ ಬರುತ್ತಿತ್ತೋ? ಇರಲಿ. ಈಗ ಕೋಕಾಕೋಲಾ ಕಂಪನಿ ಒಂದು ಕಬಡ್ಡಿ ತಂಡವನ್ನು ಪ್ರಾಯೋಜಿಸಿದರೆ ಅದರ ಆಟಗಾರರು ಕಬಡಿ, ಕಬಡಿ ಎನ್ನುವ ಬದಲು ಕೋಲಾ, ಕೋಲಾ ಎನ್ನುತ್ತಾ ಎದುರಾಳಿಗಳನ್ನು ಹಿಡಿಯಲು ಮುನ್ನುಗ್ಗಬಹುದು. ಒಂದು ಸುತ್ತು ಮುಗಿಸಿ ಬಂದು ಒಂದು ಗುಟುಕು ಕೋಲಾ ಕುಡಿಯಬಹುದು.

ಕೋಕಾಕೋಲಾ ಕಣದಲ್ಲಿ ಇಳಿದಿದೆ ಎಂದ ಮೇಲೆ ಪೆಪ್ಸಿ ಸುಮ್ಮನಿರುವುದೆ? ನೀವು ಈಗಾಗಲೇ ಊಹಿಸಿರುವಂತೆ ಪೆಪ್ಸಿ ಆಟಗಾರರು ಕಬಡಿ ಕಬಡಿ ಎನ್ನದೆ ಪೆಪ್ಸಿ ಪೆಪ್ಸಿ ಎನ್ನುತ್ತಾ ಕೋಕಾಕೋಲಾ–ಪೆಪ್ಸಿಗಳ ಸಮರ ಕಬಡಿ ಅಂಗಳಕ್ಕೂ ಇಳಿಯುತ್ತದೆ. ಆಟಗಾರರಿಗೆ ಒಳ್ಳೆಯ ಸಂಭಾವನೆ ಸಿಗುತ್ತದೆ. ಕಬಡ್ಡಿಗೆ ಇನ್ನಷ್ಟು ಪ್ರಚಾರ ಸಿಗುತ್ತದೆ. ಕುಡಿಯುವ ನೀರು ಇಲ್ಲದಿದ್ದರೂ ಇನ್ನಷ್ಟು ಹಳ್ಳಿಗಳಲ್ಲಿ ಪೆಪ್ಸಿ–ಕೋಕಾಕೋಲಾ ಸಿಗುವಂತಾಗುತ್ತದೆ.

ಉತ್ಪಾದನೆಗಳನ್ನು ಕಬಡ್ಡಿ ಕೋಕಾಕೋಲಾ–ಪೆಪ್ಸಿಗಳಿಗೆ ಸೀಮಿತಗೊಳ್ಳಬೇಕಿಲ್ಲ. ಇತರ ಉತ್ಪಾದಕರು ಸಹ ತಮ್ಮ ಮಾಲುಗಳನ್ನು ಗ್ರಾಮೀಣ ಮಾರುಕಟ್ಟೆಗಳಲ್ಲಿ ಪ್ರಚುರ ಪಡಿಸಲು ಕಬಡ್ಡಿ ಬಳಸಬಹುದು. ಉದಾಹರಣೆಗೆ, ಈ ಸೋಪ್ ಸಮರ ನೋಡಿ. ರಿನ್ ಮತ್ತು ವೀಲ್ ಹಣಾಹಣಿ ಇದೀಗ ಕಿರುತೆರೆಯ ಮೇಲೆ ಕಾಣಿಸಿಕೊಳ್ಳುತ್ತಿರುತ್ತದೆ. ಇದನ್ನು ಕಬಡ್ಡಿ ಮೂಲಕ ವಿಸ್ತರಿಸಲೂಬಹುದು. ರಿನ್ ತಂಡದ ಆಟಗಾರರು ರಿನ್ ರಿನ್ ಎನ್ನುತ್ತಾ ವೀಲ್ ತಂಡದ ಕೋಟೆಯೊಳಗೆ ಪ್ರವೇಶಿಸಿದರೆ ಎದುರಾಳಿಗಳು ವೀಲ್ ವೀಲ್ ಎನ್ನುತ್ತಾ ಪ್ರತಿಸ್ಪರ್ಧೆ ಒಡ್ಡಲು ಸಾಧ್ಯ. ಆಟದ ಕೊನೆಯಲ್ಲಿ ಎರಡೂ ತಂಡಗಳು ಮಣ್ಣಾದ ತಮ್ಮ ಬಟ್ಟೆಯನ್ನು ತಾವು ಪ್ರಯೋಜಿಸಿದ ಸೋಪ್ ಉಪಯೋಗಿಸಿ ಒಗೆಯಲೂಬಹುದು. ಆಕರ್ಷಕ ಸಂಭಾವನೆ ಸಹ ಪಡೆಯಲು ಸಾಧ್ಯ.

ಇದರಂತೆ ಇನ್ನೂ ಅನೇಕ ಸಂಭವನೀಯಗಳನ್ನು ನೀವು ಊಹಿಸಿಕೊಳ್ಳಿ, ಕಿಸಾನ್–ಮ್ಯಾಗಿ; ಪಾರ್ಲೆ–ಬ್ರಿಟಾನಿಯ; ಲಕ್ಸ್–ಲೈಫ್‌ಬಾಯ್ ತಯಾರಿಸುವ ಕಂಪನಿಗಳು ದೊಡ್ಡ ಮನಸ್ಸು ಮಾಡಿ ಈ ಸಣ್ಣ ಕ್ರೀಡೆಗೆ ಪ್ರೋತ್ಸಾಹ ನೀಡಿದರೆ ಆಟಗಾರರ ಬಾಯಿಯಿಂದ ಕಿಸಾನ್ ಕಿಸಾನ್, ಮ್ಯಾಗಿ ಮ್ಯಾಗಿ, ಪಾರ್ಲೆ ಪಾರ್ಲೆ ಹೀಗೆ ವೈವಿಧ್ಯಮಯ ಕೂಗುಗಳನ್ನು ಕೇಳಬಹುದು. ಕಬಡಿ, ಕಬಡಿ ಎನ್ನುವ ಈಗಿರುವ ಏಕತಾನಕ್ಕೆ ಅಂತ್ಯ ಹಾಡಬಹುದು.

ಈ ಪ್ರಾಯೋಜಕತ್ವ ತುಂಬಾ ಪಾಪ್ಯುಲರ್ ಆಯಿತು ಎಂದುಕೊಳ್ಳಿ. ಆಗ ಕಾರ್, ಫ್ರಿಜ್, ಟೀವಿ, ರೇಡಿಯೋ ಮುಂತಾದ ವೈಟ್ ಕಾಲರ್ ಸಾಮಗ್ರಿಗಳ ತಯಾರಕರು ಕಬಡ್ಡಿ ಅಖಾಡಕ್ಕೆ ಇಳಿಯುವುದರಲ್ಲಿ ಸಂದೇಹವೇ ಇಲ್ಲ. ಆಗ ಕಬಡ್ಡಿ ಅಂಗಳದಲ್ಲಿ ನಮಗೆ ಕೇಳಿಬರುವುದು ಮಾರುತಿ ಮಾರುತಿ; ಹೋಂಡಾ ಹೋಂಡಾ; ಗಾದ್ರೆಜ್ ಗಾದ್ರೆಜ್; ಫಿಲಿಪ್ಸ್ ಫಿಲಿಪ್ಸ್; ಸೋನಿ ಸೋನಿ; - ಹೀಗೆ ಉತ್ಪನ್ನಗಳ ಹೆಸರುಗಳೇ! ಕಬಡ್ಡಿ ಆಟಕ್ಕಷ್ಟೇ ಹೆಸರು.

ಈಗ ಇಲ್ಲೊಂದು ಸಣ್ಣ ಸಮಸ್ಯೆ ತಲೆದೋರುತ್ತದೆ. ಅದೇನೆಂದರೆ ಉಚ್ಚಾರಣೆ ಸಮಸ್ಯೆ. ವೀಲ್, ರಿನ್, ಲಕ್ಸ್ ಮುಂತಾದವುಗಳನ್ನು ಪಟಪಟ ಹೇಳಬಹುದು. ಸುಲಭ, ಆದರೆ ಕೋಕಾಕೋಲ, ಬ್ರಿಟಾನಿಯ, ಫಿಲಿಪ್ಸ್ ಮುಂತಾದವುಗಳನ್ನು ಪಟಪಟನೆ ಹೇಳಿ ನೋಡೋಣ. ತಡವರಿಸಬೇಕಾಗಿ ಬರುತ್ತದೆ. ಆದುದರಿಂದ ಇಂತಹ ತಂಡಗಳು ತಮ್ಮ ಪ್ರಾಯೋಜಕರಿಂದ ಹೆಚ್ಚಿನ ಸಂಭಾವನೆಗೆ ಬೇಡಿಕೆ ಇಡಬಹುದು.

ಇನ್ನೊಂದು ಸಾಧ್ಯತೆಯೂ ಇದೆ - ದೇಶೀ ಉತ್ಪನ್ನಗಳು ಎಂಎನ್‌ಸಿ ಸಾಮಗ್ರಿಗಳ ವಿರುದ್ಧ ಹೋರಾಡಲು ಕಬಡ್ಡಿ ಪ್ರಚಾರತಂತ್ರ. ಲಸ್ಸಿ ಮಾಡುವ ಕಂಪನಿ ತನ್ನ ತಂಡವನ್ನು ಪೆಪ್ಸಿ ತಂಡದ ವಿರುದ್ಧ ನಿಲ್ಲಿಸಿದರೆ ಹೇಗೆ? ಆಯುರ್ವೇದ ಔಷಧಿಗಳು ಅಲೋಪತಿ ಡ್ರಗ್ಸ್‌ಗಳನ್ನು ಎದುರಿಸಬಹುದೆ? ಖಾದಿ ಬೋರ್ಡ್ ರೇಮಂಡ್ ತಂಡವನ್ನು ಸದೆಬಡಿಯಬಹುದೆ? ಹಾಗೆಯೇ, ಚುನಾವಣೆಯ ಸಮಯದಲ್ಲಿ ರಾಜಕೀಯ ಪಕ್ಷಗಳು ತಮ್ಮ ತಂಡಗಳನ್ನು (ಎತ್ತಿ) ಕಟ್ಟಬಹುದು. ಆದರೆ ಸಮಸ್ಯೆ ಎಂದರೆ ಕೊನೆಯ ಘಳಿಗೆಯಲ್ಲಿ ಆಟಗಾರರು ಪಕ್ಷಾಂತರ ಮಾಡಿದರೆ?

ನಮ್ಮ ಕೆಲವು ಜನಪ್ರಿಯ ಸಿನಿಮಾ ತಾರೆಯರು ಐಪಿಎಲ್ ಮಾದರಿಯಲ್ಲಿ ತಮ್ಮದೇ ಆದ ಕಬಡ್ಡಿ ತಂಡವನ್ನು ಕಟ್ಟಿ ಪಂದ್ಯಾವಳಿಗಳಲ್ಲಿ ಆಡಲು ಬಿಡಬಹುದು. ಉದಾ: ರಾಜ್ ತಂಡ, ರಾಜ್ ರಾಜ್ ಎನ್ನುತ್ತಾ ಮುನ್ನುಗ್ಗಿದರೆ ಎದುರಾಳಿ ತಂಡ ವಿಷ್ಣು ವಿಷ್ಣು ಎನ್ನುತ್ತಲೋ ಅಥವಾ ಜಗ್ಗೇಶ್ ಜಗ್ಗೇಶ್ ಎಂದು ಪಿಸುಗುಟ್ಟುತ್ತಾ ವೈರಿಗಳ ಆವರಣವನ್ನು ಪ್ರವೇಶಿಸಬಹುದು. ಅದರಂತೆ ಜನಪ್ರಿಯ ನಟಿಯೊಬ್ಬಳು ತನ್ನ ತಂಡವನ್ನು ಎತ್ತಿ ಕಟ್ಟಿದರೆ ಆಕೆಯ ನಾಮವನ್ನು ಜಪಿಸುತ್ತಾ ಆಟಗಾರರು ಸ್ಫೂರ್ತಿಯನ್ನೂ ಪಡೆಯಲು ಸಾಧ್ಯ ಅಲ್ಲವೆ? ನಟನ ತಂಡ, ನಟಿಯ ತಂಡವನ್ನು ಎದುರಿಸಿದಾಗ ಪ್ರೇಕ್ಷಕರಿಗೆ ಆಗುವ ಉತ್ಕರ್ಷ, ಚಿಮ್ಮುವ ಉತ್ಸಾಹ, ಹೊರಹೊಮ್ಮುವ ಘೋಷಕ್ಕೆ ಸಾಟಿ ಇರುವುದೇ?

ಇವೆಲ್ಲ ನೋಡಿದಾಗ ಕಬಡ್ಡಿಯಂತಹ ದೇಶೀ ಕ್ರೀಡೆಗೆ ಇಂತಹ ಪ್ರಾಯೋಜಕತ್ವ ಸಿಕ್ಕಿದರೆ ಅದೊಂದು ಕ್ರಾಂತಿಕಾರಿ ಬೆಳವಣಿಗೆ ಎನ್ನಬಹುದು. ಆದರೆ ಭಾರತದಲ್ಲಿ ಆಗುವುದು ಸಂಕ್ರಾಂತಿಯೆ ಹೊರತು ಕ್ರಾಂತಿಯಲ್ಲ ಎಂಬುದರ ಹಿನ್ನೆಲೆಯಲ್ಲಿ ಇದೊಂದು ಟೆಕ್ನಿಕಲರ್ ಡಿಜಿಟಲ್ ಕನಸು!



# ವಿದ್ಯಮಾನಗಳು

- ಕು.ಕ.

ಒಂದು ರಾಷ್ಟ್ರ ಒಂದು ಜನ-ಒನ್ ನೇಷನ್ ಒನ್ ಪೀಪಲ್ ಎನ್ನುವುದು ಹಿಂದಿನಿಂದ ಬಂದಿರುವ ನಂಬಿಕೆ. ಒಂದು ರಾಷ್ಟ್ರ ಒಂದು ಬಾವುಟ, ಒಂದು ರಾಷ್ಟ್ರ ಒಂದು ರಾಷ್ಟ್ರಗೀತೆ, ಒಂದು ರಾಷ್ಟ್ರ ಒಬ್ಬ ರಾಷ್ಟ್ರಪಿತ ಇವೆಲ್ಲಾ ಈಚೆಗೆ ಸೇರಿರುವ ಆಡಿಷನಲ್ ಗುಣಲಕ್ಷಣಗಳು. ಈ ಪಟ್ಟಿಗೆ ತೀರಾ ಈಚಿನ ಸೇರ್ಪಡೆ ಒಂದು ರಾಷ್ಟ್ರ ಒಂದು ಕರಾಳದಿನ. ಅಮೆರಿಕಾಕ್ಕೆ 9/11ರಂತೆ, ಬ್ರಿಟನ್‌ಗೆ 7/7ರಂತೆ ಇತರ ಹಲವಾರು ದೇಶಗಳಿಗೆ, ದೇಶದ ಇಡಿ ಜನತೆ ನಾಚಬೇಕಾದ, ಮತ್ತೆ ಹಾಗಾಗಲು ಬಿಡುವುದಿಲ್ಲ ಎಂದು ರೋಷಗೊಳ್ಳಬೇಕಾದ A Day of Shame ಇದೆ. ಎಲ್ಲದರಲ್ಲೂ ಭಾರತದ್ದು ತನ್ನದೇ ಆದ ಒಂದು ವಿಶಿಷ್ಟತೆ ತಾನೆ? ಬೇರೆ ದೇಶಗಳಿಗೆ ಒಂದು ಮತ್ತು ಒಂದೇ ಒಂದು ಕರಾಳ ದಿನವಾದರೆ ನಮ್ಮದು ಹಲವು ಕರಾಳ ದಿನಗಳ ದೇಶ! ಇವುಗಳಲ್ಲಿ ಅತ್ಯಂತ ಕರಾಳ ದಿನ ಯಾವುದು? ನಮ್ಮ ದೇಶದ ಪಾರ್ಲಿಮೆಂಟ್ ಮೇಲೆ ಧಾಳಿನಡೆದ ದಿನವನ್ನು ದಿ ಕರಾಳ ದಿನವೆನ್ನಬೇಕೇ ಅಥವಾ ಕಾಂದಹಾರ್ ವಿಮಾನ ನಿಲ್ದಾಣದಲ್ಲಿ ಖುದ್ದು ನಮ್ಮ ವಿದೇಶ ಮಂತ್ರಿಗಳು ಅತ್ಯುಗ್ರನೊಬ್ಬನನ್ನು ನಮ್ಮ ವೈರಿಗಳಿಗೆ ಒಪ್ಪಿಸಿದ ದಿನವನ್ನು ರಾಷ್ಟ್ರೀಯ ಕರಾಳ ದಿನವೆನ್ನಬೇಕೇ ಎನ್ನುವುದರಲ್ಲಿ ವಾಜಪೇಯಿಯವರ ಕಾಲದಿಂದ ಭಿನ್ನಾಭಿಪ್ರಾಯವಿತ್ತು. ಈಗ ಯೂಪಿಎ ಆಡಳಿತ ಕಾಲದಲ್ಲಿ ಈ ಪ್ರಶ್ನೆಗೆ ಉತ್ತರ ಸಿಕ್ಕಿದೆ. 2008ರ 11/26 ನಮ್ಮ ರಾಷ್ಟ್ರೀಯ ಕರಾಳ ದಿನವೆನ್ನುವುದರಲ್ಲಿ ಈಗ ಯಾವುದೇ ಅನುಮಾನ ಉಳಿದಿಲ್ಲ. ಈ ಕರಾಳ ದಿನದಲ್ಲೂ ನಮಗೆ ಮತ್ತೊಂದು ಕೋಡು. ಬೇರೆ ದೇಶಗಳ ಕರಾಳ ದಿನಗಳ ಅವಧಿ ಒಂದೇ ದಿನ 24 ಗಂಟೆಗಳಿಗಿಂತ ಕಡಿಮೆ. ಆದರೆ ನಮ್ಮ ಕರಾಳ ದಿನ ಮೂರು ರಾತ್ರಿ ಎರಡು ಹಗಲು ಒಟ್ಟು ಅರವತ್ತು ಗಂಟೆಗಳು ಅಥವಾ 3600 ನಿಮಿಷಗಳಷ್ಟು ದೀರ್ಘ. ಇಲ್ಲೂ ನಮ್ಮದೇ ದಾಖಲೆ!

★★★

ನಮ್ಮ ಮಹಾಕವಿ ಬೇಂದ್ರೆ 'ಮಕ್ಕಳಿವರೇನಮ್ಮ ಮಕ್ಕಳಿವರೇನಮ್ಮ ಮೂವತ್ತು ಮೂರು ಕೋಟಿ' ಎಂದು ಹಾಡುತ್ತಾ ಇಂತಹ ಪುತ್ರ-ಪುತ್ರಿರತ್ನರುಗಳನ್ನು ಪಡೆದ ಭಾರತಮಾತೆಗೆ ತಮ್ಮ ಕನಿಕರ ವಿಷಾದಗಳನ್ನು ತಮ್ಮದೇ ಆದ ರೀತಿಯಲ್ಲಿ ತಿಳಿಸಿದ್ದರು. ಈಗ ಉಗ್ರರ ದಾಳಿಗಳನ್ನು ನೋಡುತ್ತಿರುವಾಗ 'ನಾಯಕರುಗಳಿವರೇನಮ್ಮ ನಾಯಕರುಗಳಿವರೇನಮ್ಮ ನೂರು (ಚಿಲ್ಲರೆ) ಕೋಟಿ ಜನರ ಇಂತಹ ನಾಯಕರುಗಳಿವರೇನಮ್ಮ' ಎಂದು ಅಳುತ್ತಾ ತಲೆ ಚಚ್ಚಿಕೊಳ್ಳಬೇಕೆನಿಸುತ್ತಿದೆ. ನಮ್ಮ ಮಹಾನಾಯಕ, ಕನಿಷ್ಟಪಕ್ಷ ಇನ್ ಥಿಯರಿ, ಮಮೋಸಿಂ.

ಅವರ ಆರ್ಥಿಕ ಪರಿಣತಿಯ ಬಗ್ಗೆ ನಮಗೆ ಗೌರವವಿದೆ. ಅವರ ಪ್ರಾಮಾಣಿಕತೆಯ ಬಗ್ಗೆ ವಿಶ್ವಾಸವಿದೆ. ನಮ್ಮ ಕುಮಾರವ್ಯಾಸ 'ಅರಸುಗಳಿಗಿದು ವೀರ' ಎಂದಾಗ ಆಳುವ ಅರಸರ ಮೊದಲ ಅರ್ಹತೆ ವೀರತೆ ಎಂದು ಹೇಳಿದ್ದಾನಲ್ಲವೇ? ಇಂತಹ ವೀರತೆಯ ಯಾವುದೇ ಇಂಡೆಕ್ಸ್‌ನಲ್ಲಿ ನಮ್ಮ ಪ್ರಮಂಗಳಿಗೆ ಎಷ್ಟು ಪಾಯಿಂಟ್ ಸಿಗಬಹುದು? ಉತ್ತರ ನಿಮಗೂ ಗೊತ್ತು ನನಗೂ ಗೊತ್ತು. ಆದರೆ ಪಬ್ಲಿಕ್ ಆಗಿ ಹೇಳುವುದು ಬೇಡ. ಬಾಯಿಬಿಟ್ಟರೆ ಬಣ್ಣಗೇಡು.

★★★

ಖುದ್ದು ಸೋನಿಯಾ ಗಾಂಧಿಯ ಮಗಳು ಪ್ರಿಯಂಕಾ ವಡೇರ ಇಂತಹ ಕ್ರೈಸಿಸ್ ಕಾಲದಲ್ಲಿ ನಮ್ಮ ದೇಶಕ್ಕೆ ನಮ್ಮಜ್ಜಿಯಂತಹ ನಾಯಕರು ಇರಬೇಕಾಗಿತ್ತು ಎಂದು ಹೇಳಿದ್ದಾರಂತೆ. ಅವರ ಮಾತನ್ನು ದೇಶದ ಬಹುಜನರು ಒಪ್ಪಿದ್ದಾರೆ. ಬಂಗ್ಲಾದೇಶದ ಮುಕ್ತಿ ಸಮರದಲ್ಲಿ ವಿರೋಧಿ ನಾಯಕ ವಾಜಪೇಯಿಯವರೇ ಪ್ರಿಯಂಕಾ ಅಜ್ಜಿ ಇಂದಿರಾಗಾಂಧಿಯವರನ್ನು ದುರ್ಗೆಗೆ ಹೋಲಿಸಿದ್ದು ನಿಮಗೂ ಜ್ಞಾಪಕವಿರಬೇಕು. (ಇದನ್ನು ಓದಿದ ನನ್ನ ದಾವಣಗೆರೆ ಜಿಲ್ಲೆಯ ಗೆಳೆಯ ನೀವು ನಮ್ಮ ದುರ್ಗವ್ವನನ್ನೂ ದಸರಾದಾಗೆ ಕಡ್ಲಿಬ್ಯಾಳಿ ಅಂಬೊಡೆ ತಿನ್ನೋ ದೇವತೆ ಮಾಡಿದ್ದೀರಿ. ನಮ್ಮ ಶುದ್ಧ ನಾನ್ ವೆಜಿಟೇರಿಯನ್ ದುರ್ಗಿಪ್ಯಾಟಿ ದುರ್ಗವ್ವನಂತಹ ರಿಯಲ್ ದುರ್ಗೆ ಈಗ ಬೇಕಾಗಿತ್ತು ಎಂದು ಸಾಫ್ ಬರೀ ಎಂದು ಹೇಳುತ್ತಿದ್ದಾನೆ.)

★★★

ಪ್ರಧಾನ ಮಂತ್ರಿ ದೇಶದ ನಂಬರ್ ಒನ್. ಅವರ ಮೇಜಿನ ಮೇಲೆ 'the buck stops here' ಜವಾಬ್ದಾರಿ ಇಲ್ಲಿಗೆ ಮುಗಿಯುತ್ತದೆ ನಾನು ಮಾಡದ್ದನ್ನು ಇನ್ನು ಯಾರೂ ಮಾಡಲಾರರು ಎನ್ನುವ ಬೋರ್ಡ್ ಹಾಕಿಕೊಂಡಿರಬೇಕು. ಆದರೆ ನಮ್ಮ ಮಮೋಸಿಂ ಇಂತಹ ಬೋರ್ಡ್ ಹಾಕಿಕೊಳ್ಳಲು ಇನ್ನೊಬ್ಬರ ಅಪ್ಪಣೆಗಾಗಿ ಕಾಯಬೇಕು. ಪಾಪ ಅವರೇ ಇನ್ನೊಬ್ಬರ ಮುಂದೆ ಪ್ರತಿದಿನ 'ತೇನವಿನ ತೃಣಮಪಿ ನ ಚಲತಿ' ಎನ್ನುವ ಸ್ತೋತ್ರಪಾಠ ಹೇಳಬೇಕಾಗಿರುವಾಗ ಇಂತಹ ಬೋರ್ಡ್ ಹೇಗೆ ಹಾಕಿಕೊಂಡಾರು? ಒಂದು ಕಡೆ 'ಸಮಸ್ತ ಅಧಿಕಾರ ಸೊನ್ನೆ ಜವಾಬ್ದಾರಿ' ಮತ್ತೊಂದು ಕಡೆ 'ಸಮಸ್ತ ಜವಾಬ್ದಾರಿ ಕನಿಷ್ಟ ಅಧಿಕಾರ'. ಮಮೋಸಿಂ ಬಗ್ಗೆ ಎಲ್ಲರಿಗೂ ಕನಿಕರ. ಈಗಲಾದರು tried and failed again and again ಗೃಹಮಂತ್ರಿಗಳು ರಾಜಿನಾಮೆ ಕೊಟ್ಟಿದ್ದು ಚೂರು ಸಮಾಧಾನದ ಸಂಗತಿ.

★★★

ಮುಂಬೈ ದಾಳಿ ಇಡೀ ದೇಶದ ಮೇಲಿನ, ಭಾರತೀಯರ ಮೇಲಿನ ಆಕ್ರಮಣ. ಆದರೆ ಇದನ್ನು ಎದುರಿಸುವ ಹೆಚ್ಚಿನ ಜವಾಬ್ದಾರಿ ಮಹಾರಾಷ್ಟ್ರ ರಾಜ್ಯ ಸರ್ಕಾರದ ಮೇಲೆ ಬಿತ್ತು. ಈ ಮಹಾರಾಷ್ಟ್ರದ ಮಹಾ ನಾಯಕರುಗಳು? ನಂಬರ್ ಒನ್ ನಾಯಕ ಸಿಎಂ ವಿಲಾಸರಾವ್ ದಗಡೋಜಿರಾಯರಿಗೆ ಪಾಪ ಅವರ ಮಗನ ಕೆರಿಯರ್ ಚಿಂತೆ. ಮುಂಬೈ ಜೊತೆಗೆ ಇಡೀ ದೇಶ ಉರಿಯುತ್ತಿದೆ. ಅದಕ್ಕೆ ಪ್ರತೀಕವಾಗಿ ತಾಜ್ ಹೊಟಲಿನ ಬೆಂಕಿ ಇನ್ನೂ ಹೊಗೆಯಾಡುತ್ತಿದೆ. ಆಗಲೆ ದೇಶಮುಖ್ ಪಿತೃಶ್ರೀ, ಚಿರಂಜೀವಿ ರಿತೀಶ್, ಖ್ಯಾತ ಚಲನಚಿತ್ರ

ನಿರ್ದೇಶಕರು - ಇವರ ಮೆರವಣಿಗೆ ಮುಂದಿನ ಸಿನಿಮಾ locale ಹುಡುಕುತ್ತಾ ತಾಜ್ ಕಾರಿಡಾರಿನಲ್ಲಿ. ಇನ್ನೊಂದು ಮಹಾ ನಾಯಕರುಗಳಲ್ಲಿ ನಂಬರ್ ಟು ಡಿಸಿಎಂಗೆ ದಾಳಿಕಾರರು ಐದು ಸಾವಿರ ಜನರನ್ನು ಕೊಲ್ಲಲು ಬಂದಿದ್ದಾರೆ ಎನ್ನುವ ಸ್ಪೆಷಲ್ ಇಂಟೆಲಿಜೆನ್ಸ್ ಅಥವಾ ಖಾಸಾ ಹೋರಾರತ್ನರ ಭವಿಷ್ಯವಾಣಿ! ಈ ಪಾಟೀಲರಿಗೆ ತಮ್ಮ ಕೃಪಾಕಟಾಕ್ಷದಿಂದ 5000ದ ಬದಲು ಕೇವಲ ಮುನ್ನೂರು ಜನರ ಸಾವು ಎನ್ನುವ ನಂಬಿಕೆ! ನಾನು 4700 ಜನರನ್ನು ಉಳಿಸಿದೆ ಎನ್ನುವ ಅವರ ಆತ್ಮ ಸ್ತುತಿ ಕೇಳಿ ಜನರಿಗೆ ಅಸಹ್ಯ. ಈ ಇಬ್ಬರು ನಾಯಕರುಗಳಿಗೆ ಈಗಲಾದರೂ ಗೆಟ್ ಔಟ್ ಮಾಡಿದ್ದು ಸಮಾಧಾನದ ಸಂಗತಿ.

★★★

ಇವರೇನೋ ಹೋದರು ಸರಿ. ಆದರೆ ಇವರ ಜಾಗಕ್ಕೆ ಬಂದವರು? ಬಾಬ್ರಿ ಮಸೀದಿ ಗೋಪುರ ಬೀಳುತ್ತಿದ್ದಾಗ ಗೊರಕೆ ಹೊಡೆಯುತ್ತಿದ್ದ ಮಾಜಿ ಕೇಂದ್ರ ಗೃಹಮಂತ್ರಿ ಶಂಕರರಾವ್ ಪಾಟೀಲರ ಪುತ್ರ ಈಗ ಮಹಾ ಮುಮಂ. ತೆಲಗಿ ಸ್ಟಾಂಪ್ ಹಗರಣದ ಕುಖ್ಯಾತಿಯ ಲಕೋಬಾ ಲೋಖಾಂಡೆ ಅಲಿಯಾಸ್ ಚಗ್ಗನ್ ಭುಜಬಲ್ ಡೆಪ್ಯೂಟಿ ಸಿ.ಎಂ. ಇಲ್ಲೂ ಬಾಲಹೋಯ್ತು ಕೋಲು ಬಂತು ಡುಂಡುಂ ಎಂದು ಅಳಬೇಕೇ ಅಥವಾ ಕೋಲು ಹೋಯ್ತು ಬಾಲಬಂತು ಡುಂಡುಂ ಎಂದು ನಗಬೇಕೇ ತಿಳಿಯುವುದಿಲ್ಲ. ಇಲ್ಲೂ ಒಂದು ಸಣ್ಣ ಸಮಾಧಾನ ಸಂಗತಿ. ದೇಶದ ಅತ್ಯುತ್ತಮ ಪೊಲೀಸ್ ಪಡೆ ಎಂದು ಹೆಸರುಮಾಡಿದ್ದ ಮುಂಬೈ ಪೊಲೀಸರನ್ನು ಅತ್ಯಂತ ಭ್ರಷ್ಟಪಡೆ ಎಂದು ಕಾರಣರಾದವರು ಎಂದು ಗುರುತಿಸುವವರನ್ನು ಕೇವಲ ಡಿಸಿಎಂ ಮಾಡಿದ್ದಾರೆ ನಿಜ. ಆದರೆ ಅವರಿಗೆ ಮತ್ತೆ ಮತ್ತೆ ಪೊಲೀಸ್ ಇಲಾಖೆ ಕೊಟ್ಟಿಲ್ಲ.

★★★

ಮುಂಬೈ ದಾಳಿ ಮುಗಿದು ಎಷ್ಟೋ ದಿನಗಳಾಗಿವೆ. ಆದರೂ ಇನ್ನೂ ನೂರಾರು ಪ್ರಶ್ನೆಗಳಿಗೆ ಉತ್ತರ ಸಿಕ್ಕಿಲ್ಲ. ಕರಾಚಿಯಿಂದ ಹೊರಟ ದಾಳಿಕೋರರ ಸಂಖ್ಯೆ ಎಷ್ಟು? ಅಂದಿನ ಸಿಎಂ 20ಜನ ಎಂದಿದ್ದರು. ಆದರೆ ಎನ್‌ಎಸ್‌ಜಿ ಪ್ರತಿದಾಳಿಯಲ್ಲಿ ಸತ್ತ ಉಗ್ರರು ಒಂಬತ್ತು, ಸೆರೆಸಿಕ್ಕವನು ಒಬ್ಬ. ಒಟ್ಟು ಹತ್ತು. ಇನ್ನು ಉಳಿದ ಹತ್ತು ಜನರು ಎಲ್ಲಿ ತಪ್ಪಿಸಿಕೊಂಡರು? ಸಿಎಂ ಹೇಳಿದ್ದೇ ತಪ್ಪಾಗಿದ್ದರೆ ಹತ್ತೇ ಜನರಿಗೆ ಇಷ್ಟೊಂದು ಹಾನಿ ಮಾಡಲು ಸಾಧ್ಯವಾಯಿತೆ? ಅವರುಗಳಿಗೆ ಮುಂಬೈ ನಗರದಲ್ಲಿ ಯಾರೂ ಸಹಾಯ ಮಾಡಲಿಲ್ಲವೇ? ಸೆರೆ ಸಿಕ್ಕಿದ ಉಗ್ರಗಾಮಿಯ ಹೆಸರಿನ ಬಗ್ಗೆ ದೊಡ್ಡ ವಿವಾದವೆದ್ದಿತ್ತು. ಈಗ ಅವನ ನಿಜವಾದ ಹೆಸರು ಮಹಮದ್ ಅಜ್ಮಲ್ ಅಮೀನ್ ಕಸಾಬ್ (ಇಮಾನ್) ಎನ್ನುವುದು ಖಾತ್ರಿಯಾಗಿದೆ. ನಮ್ಮ ಆಂಧ್ರದ ಎಬಿಸಿಡಿಜೆಕೆಎಲ್ ರಾವ್‌ಗಳಂತೆ ಈ ಎಂಎಎಕೆ (ಇ) ಹೆಸರು ಪೊಲೀಸಿನವರನ್ನು confuse ಮಾಡಿದ್ದರೆ ಆಶ್ಚರ್ಯ ಪಡಬೇಕಾಗಿಲ್ಲ.

★★★

ಈಗ ಈ ಅರವತ್ತು ಗಂಟುಗಳ ನಾಟಕದಲ್ಲಿ ಮೀಡಿಯಾ ಪಾತ್ರದ ಬಗ್ಗೆ ದೊಡ್ಡ ವಿವಾದ ಎದ್ದಿದೆ. ಬರ್ಖಾ, ಶ್ರೀನಿವಾಸ್, ರಾಜದೀಪ್, ಗೋಸ್ವಾಮಿ ಇತ್ಯಾದಿ ಇತ್ಯಾದಿ ಮೂರು ರಾತ್ರಿ ನಿದ್ದೆಗೆಟ್ಟದ್ದನ್ನು ನಾವು ನೋಡಿದ್ದೆವು. ಬೇಷ್ ಎಂದಿದ್ದೆವು. ರಾಜದೀಪ್ ತಪ್ಪಾಯಿತು ಕ್ಷಮಿಸಿ

ಎಂದು ಹೇಳಿದ್ದನ್ನೂ ಗಮನಿಸಿದ್ದೆವು. ನೂರಾರು ಜನರ ತಲ್ಲಣಕ್ಕೆ ಕಾರಣಕ್ಕೆ ಕಾರಣವಾದ ಆ ದೊಡ್ಡ ತಪ್ಪನ್ನೂ ಕ್ಷಮಿಸಿಯೂ ಇದ್ದೆವು. ಆದರೆ ನಾವೇ ಬ್ರೇಕಿಂಗ್ ದಿ ನ್ಯೂಸ್‌ನಲ್ಲಿ ಮೊದಲಾಗಬೇಕೇನ್ನುವ ಪೈಪೋಟಿಯಲ್ಲಿ ಕ್ಷಮೆ ಕೇಳದ ಇನ್ನೂ ಹಲವು ತಪ್ಪುಗಳನ್ನು ಮಾಡಿವೆಯಂತೆ. ಮೀಡಿಯಾದಿಂದ ಆಗ ನಡೆಯುತ್ತಿದ್ದ ಕಾರ್ಯಾಚರಣೆಗೆ ಅಡ್ಡಿಯಾಯಿತಂತೆ. ಮೀಡಿಯಾ ಸರ್ವಸ್ವತಂತ್ರ ಎಂದು ನಾವು ಕೇಳುತ್ತಿರುತ್ತೇವೆ.. ಆದರೂ ನಮ್ಮ ಮೀಡಿಯಾ ನಾವು ತಿಳಿದುಕೊಂಡಿರುವಷ್ಟು ಸ್ವತಂತ್ರವಾಗಿದೆಯೇ? ಬರ್ಖಾ ತಾಜ ಹೋಟಲಿನಲ್ಲಿ ಸತ್ತವರ ಸಂಖ್ಯೆ ಅಧಿಕೃತವಾಗಿ ಪ್ರಕಟವಾಗಿಲ್ಲ, ಆದರೆ ಅದು ನೂರರ ಹತ್ತಿರವಿದೆ ಎಂದು ಕ್ಯಾಮರಾ ಎದುರಿಗೆ ಹೇಳಿದರು. ಟೈಂಸ್ ಆಫ್ ಇಂಡಿಯಾ ಸಹ ಇದೇ ರೀತಿ ವರದಿ ಮಾಡಿತ್ತು. ಆದರೆ ಈಗಲೂ ಈ ವಿಷಯ ಅಧಿಕೃತವಾಗಿಲ್ಲ. ಮೀಡಿಯಾ ತಾನು ವರದಿ ಮಾಡಿದ್ದನ್ನು ತಾನೇ ಮರೆತಿದೆ. ಅಥವ ಇದು 'ರಾಷ್ಟ್ರೀಯ ಹಿತ'ವನ್ನು ಕಾಯುವ ಒಂದು ರೀತಿಯೇ?



ಈ ಮುಂಬೈ ಸಮರದ ಬಗ್ಗೆ ನಮ್ಮ ಒಟ್ಟಾರೆ ಅಭಿಪ್ರಾಯವೇನು? ಈ ಕರಾಳ ಮುಂಬೈ ಸಮರವಾದ ಕೆಲವೇ ದಿನಗಳ ನಂತರ ಮತದಾನವಾದ ರಾಜ್ಯಗಳ ವಿಧಾನಸಭಾ ಫಲಿತಾಂಶ ಈ ಉತ್ತರ ಕೊಟ್ಟಿದೆ. ಮುಖ್ಯವಾದ ನಾಲ್ಕು ರಾಜ್ಯಗಳಲ್ಲಿ ಎರಡರಲ್ಲಿ ಬಿಜೆಪಿಗೆ ಜಯ ಕಾಂಗ್ರೆಸಿಗೆ ಸೋಲು. ಇನ್ನೆರಡರಲ್ಲಿ ಕಾಂಗ್ರೆಸಿಗೆ ಜಯ ಬಿಜೆಪಿಗೆ ಸೋಲು. ಈ ಉತ್ತರ ಸ್ಪಷ್ಟವಾಗಿ ಹೇಳುತ್ತದೆ- ಕಾಂಗ್ರೆಸ್ ಟೆರರಿಸಂ ಎದುರಿಸುವಲ್ಲಿ ಸೋತಿದೆ, ಪೂರ್ಣವಾಗಿ ಸೋತಿದೆ. ಆದರೆ ಈ ವಿಷಯದಲ್ಲಿ ಬಿಜೆಪಿ ಟ್ರಾಕ್ ರೆಕಾರ್ಡ್ ಭಿನ್ನವಾಗಿಲ್ಲ. ನಮಗೆ ಕಾಂಗ್ರೆಸ್- ಯುಪಿಎ ಬಗ್ಗೆ ನಂಬಿಕೆಯಿಲ್ಲ. ಅದೇ ಸಮಯದಲ್ಲಿ ಬಿಜೆಪಿ- ಎನ್‌ಡಿಎ ಇದಕ್ಕಿಂತ ಹೆಚ್ಚಿನದನ್ನು ಸಾಧಿಸುತ್ತದೆ ಎನ್ನುವ ನಂಬಿಕೆಯೂ ಇಲ್ಲ.



**ನಿನ್ನ ಕೈಯ**
**ಬಳೆ**
**ಹಳೆ ಬಳೆ, ಆದರೆ**
**ನೀನು ಮಾತ್ರ ನನಗೆ**
**ಹೊಸ**
**ಬಳೆ**






'ಏನು ರಾಯರೇ, ಎಲ್ಲಿಗೆ ತಮ್ಮ ಪ್ರಯಾಸ?'



ಒಂದೈದು ರೂಪಾಯ್ನ ಬೆರಣಿ ತೊಗೊಂಡು ಬಿಡೋಣ ಕಣೇ,
ಯಾರಿಗ್ಗೊತ್ತು, ಈ ಸರ್ಕಾರ ಅದರ ಮೇಲೂ ತೆರಿಗೆ ಹಾಕಬಹುದು!!

**ಶ್ರೀ ಎಸ್.ಕೆ. ನಾಡಿಗ್**
**ನಮನ**
**1928-2008**



ನಮ್ಮದೇ ಪೇಪರ್ ಆದ್ರೂ, ಇನ್ನೊಬ್ರು ಓದುತ್ತಿರಬೇಕಾದ್ರೆ,
ಇಣುಕಿ ನೋಡ್ಬಾರ್ದೂಂತ ಮ್ಯಾನರ್ಸ್ ಗೊತ್ತಿಲ್ಲವೇನ್ರೀ?

# ಸಂಬಂಧಗಳು

- ಕು.ಗೋ.

ಕಾರು ಇತ್ತು. ಹೋಗುವವರು ಆರು ಜನರಿದ್ದೆವು. ನಡೆದುಕೊಂಡೇ ಹೋದರೆ ಸುಮಾರು ಒಂದು ಕಿಲೋಮೀಟರ್ ದೂರವಾಗುತ್ತದೆ ಕಲ್ಯಾಣ ಮಂಟಪಕ್ಕೆ. ಕಾರಿನಲ್ಲೇ ಹೊರಟೆವು. ಮೇಘನ ಮದುವೆ. ಬರಲೇಬೇಕೆಂದು ಒತ್ತಾಯ ಮಾಡಿದ್ದ. ಚೆನ್ನಾಗಿ ಮೈ ಬೆಳೆಸಿಕೊಂಡು, ಮೀಸೆ ಬೆಳೆಸಿಕೊಂಡು ಮನೆಯಲ್ಲಿ ಮೂರೇ ಜನರಿದ್ದರೂ ಮೂವತ್ತು ಜನ ಆರಾಮವಾಗಿ ಇರಬಹುದಾದಷ್ಟು ದೊಡ್ಡ ಮನೆ ಕಟ್ಟಿಸಿದ್ದ. ಬಹಳ ಜನಪ್ರಿಯ ವ್ಯಕ್ತಿಯಾಗಿದ್ದ ತನ್ನ ವ್ಯವಹಾರಗಳಿಂದ. ನಮ್ಮ ಕುಟುಂಬದ ಸ್ನೇಹಿತನೂ ಆಗಿದ್ದ.

ಕಲ್ಯಾಣ ಮಂಟಪದ ಬಳಿ ಎಲ್ಲೆಲ್ಲೂ ಕಾರುಗಳು, ಮೋಟರ್ ಸೈಕಲ್‌ಗಳು. ನಮ್ಮ ಕಾರನ್ನು ನಿಲ್ಲಿಸಲು ಜಾಗವೇ ಇರಲಿಲ್ಲ. ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿ ಸ್ವಲ್ಪ ಖಾಲಿ ಸ್ಥಳವಿತ್ತು. ಅಲ್ಲೇ ಕಾರು ನಿಲ್ಲಿಸಿ ಒಂದೂವರೆ ಕಿಲೋಮೀಟರ್ ನಡೆದುಕೊಂಡೇ ಬರಬೇಕಾಯಿತು. ನಮ್ಮ ಹೆಡ್ಡತನವೂ ಇದಕ್ಕೆ ಕಾರಣ. ಎಲ್ಲರೂ ಕಲ್ಯಾಣ ಮಂಟಪದಲ್ಲಿ ಇಳಿದು ಡ್ರೈವರ್ ಮಾತ್ರ ಒಂದೂವರೆ ಕಿಲೋಮೀಟರ್ ನಡೆದಿದ್ದರೆ ಸಾಕಿತ್ತು. ಅಂತೂ ದೇವರು ನಡೆಸಿದ.

ಬಾಗಿಲಲ್ಲೇ ಪಾನಕ, ಬಾದಾಮಿ ಹಾಲು, ಮದುವೆಯ ಹಾಲಿನಲ್ಲಿ ಗಿಜಿ ಗಿಜಿ ಜನ ಗೌಜಿ ಗದ್ದಲ, ಮಂತ್ರ, ವಾದ್ಯ, ಬೇಂಡು, ಚಿನ್ನ, ಸೀರೆ, ಸೂಟು ಬೂಟು. ಸ್ವಲ್ಪ ಹೊತ್ತಿನಲ್ಲಿ ಊಟದ ಹಾಲ್‌ಗೆ ದೌಡು. ಚಿರೋಟಿ ಹಾಲು, ಅದು ಇದು, ಐಸ್‌ಕ್ರೀಂ, ಬೊಂಬಾಯಿ ಬೀಡಾ ಅಗಿದು ಜಗಿದು, ಚಪ್ಪಲಿ ಕಳಚಿಬಿಟ್ಟು ಮದುಮಕ್ಕಳೊಡನೆ ಫೋಟೋ ತೆಗೆಸಿಕೊಂಡು, ಸಿಕ್ಕಿದವರ ಹತ್ತಿರ ಎಲ್ಲ ಮಾತನಾಡಿ ಕಲ್ಯಾಣ ಮಂಟಪದಿಂದ ಹೊರಬಂದೆವು ಡ್ರೈವರಿಗೆ ಕಾರು ತರಲು ಹೇಳಿದೆವು ಮನೆಗೆ ಹೊರಡಲು. ಆತ ಹೋದ. ನಾವು ಅಲ್ಲಿ ಇಲ್ಲಿ ಚದರಿ ಗುರುತಿರುವವರ ಹತ್ತಿರ ಮಾತನಾಡುತ್ತಾ ನಿಂತೆವು.

ಮದುಮಗಳ ಅಪ್ಪ ಹೊರಗೆ ಬಂದು ಯಾರನ್ನೋ ವಿಚಾರಿಸುತ್ತಿದ್ದರು. ಹೌದು ಅವರು ಮದುಮಗಳ ಅಪ್ಪನಂತೆಯೇ ಇದ್ದರು. ತಲೆಗೆ ಪೇಟಾ ಸುತ್ತಿದ್ದರು – ಸಿಲ್ಕ್‌ಬಟ್ಟೆ, ಮೇಲಂಗಿ ರಹಿತ ಆಜಾನುಬಾಹು, ಅರವಿಂದ ದಳಾಯತಾಕ್ಷ, ಅವರೊಡನೆ ಒಂದು ಹುಡುಗಿ, ಹುಡುಗಿ ಏನು ಹೆಂಗಸೇ, ಮಾತನಾಡುತ್ತಿದ್ದಳು ಅವಳ ಮಗಳ ಹಾಗೆ, ಮದುಮಗಳ ಅಕ್ಕನ ಹಾಗೆ ಕಂಡಳು. ಅಪ್ಪ ಹೋದ ಮೇಲೆ ಮಗಳ ಬಳಿ ಹೋಗಿ ಕೇಳಿದೆ "ನೀವು

ಮದುಮಗಳ...?'' ನಾನು 'ಅವಳ ಅಕ್ಕ' ಎಂದಳು. ''ಅವಳ ಹಾಗೆಯೇ ಇದ್ದೀರಿ. ಓಗೆ ಕೇಳಿದೆ ಬೇಸರವಿಲ್ಲ ತಾನೆ?'' ಎಂದೆ. ''ಇಲ್ಲಪ್ಪ' ಎಂದು ನಗಾಡಿದಳು. ''ನೀವು?'' ಎಂದು ಪ್ರಶ್ನೆ ಹಾಕಿದಳು 'ನಾನು ಮದುಮಗನ ಕುಟುಂಬ ಸ್ನೇಹಿತ' ಎಂದೆ. 'ಸಂತೋಷ' ಎಂದಳು. ನನಗೆ ಆವಳೊಡನೆ ಇನ್ನು ಮಾತನಾಡಬೇಕೆನಿಸಿತು. ಎಲ್ಲಿದ್ದೀರಿ, ಏನ್ಮಾಡ್ತಾ ಇದ್ದೀರಿ,. ಗಂಡ ಏನು ಕೆಲಸದಲ್ಲಿದ್ದಾರೆ, ನಿವು ಎಷ್ಟು ಜನ ಅಣ್ಣ ತಮ್ಮಂದಿರು ಅಕ್ಕ ತಂಗಿಯರು ಇತ್ಯಾದಿ ಕೇಳಿದೆ., ಎಲ್ಲವಕ್ಕೂ ನಗು ನಗುತ್ತಾ ಉತ್ತರಿಸಿದಳು. ಇನ್ನು ಪ್ರಶ್ನೆ ಇದ್ದರೆ ಕೇಳಿ ಎಂಬಂತೆ ನಿಂತಳು. ''ನನ್ನ ಅಣ್ಣ ಮಲೇಶ್ಯಾದಲ್ಲಿದ್ದಾನೆ. ಅವನ ಹೆಂಡತಿಯೂ ಅಲ್ಲೇ ಇದ್ದಾಳೆ. ವಿಪ್ರೋ ಕಂಪೆನಿಯಲ್ಲಿ ಕೆಲಸದಲ್ಲಿದ್ದಾಳೆ'' ಎಂದಾಗ ನನ್ನ ಕಿವಿ ನೆಟ್ಟಗಾಯಿತು. ''ನನ್ನ ಮಗನೂ ವಿಪ್ರೋದಲ್ಲೇ ಇದ್ದಾನೆ. ಅಮೆರಿಕದಲ್ಲಿದ್ದ. ಈಗ ಬಂಧಿದ್ದಾನೆ. ಇಲ್ಲಿ ಮದುವೆಗೂ ಬಂದಿದ್ದಾನೆ'' ಎಂದೆ ''ಹೌದಾ? ಅತ್ತಿಗೆಯನ್ನು ಕರೀತೇನೆ'' ಎಂದಳು – ಬೇಡ ಬೇಡವೆಂದರೂ ಅತ್ತಿಗೆಯನ್ನು ಹುಡುಕಿ ನನ್ನ ಮುಂದೆ ನಿಲ್ಲಿಸಿ ಮದುವೆ ಹಾಲಿಗೆ ಹೋದಳು.

ಆ ಅತ್ತಿಗೆಯೋ ಬಿಳಿ ಬಿಳಿಯಾಗಿ ಅಪ್ಸರೆಯಂತೆ ಕಂಗೊಳಿಸುತ್ತಿದ್ದಳು ನಮಸ್ಕಾರ ಪ್ರತಿ ನಮಸ್ಕಾರವಾಯಿತು ತನಗೆ ಎರಡು ಮಕ್ಕಳು ಎಂದಳು. ''ನಂಬೊಕ್ಕಾಗುಲ್ಲ'' ಎಂದೆ. ನನ್ನ ಮಗನನ್ನು ಕರೆದು ಪರಿಚಯಿಸಿದೆ. ಬಹಳ ವರ್ಷಗಳಿಂದ ಪರಿಚಯವಿದ್ದವರ ಹಾಗೆ ಅವರಿಬ್ಬರೂ ಮಾತನಾಡಿದರು – ಕೇಳುತ್ತಾ ನಿಂತೆ. ಅಷ್ಟರಲ್ಲಿ ಕೆಲವರು ಬಂದರು – ಆ ಅತ್ತಿಗೆ (ಅವಳ ಹೆಸರು ಮರೆತುಹೋಗಿದೆ) ಇದು ನನ್ನ ಅಮ್ಮ, ಇದು ನನ್ನ ತಂಗಿ, ಇದು ನನ್ನ ತಮ್ಮ ಇದು ನನ್ನ ನೆರಮನೆಯವರು ಎಂದು ಹೇಳಿ ಎಲ್ಲರೂ ನಮಗೆ ನಮಸ್ಕರಿಸುವ ಹಾಗೆ ಮಾಡಿದರು. ಅವಳ ಅಮ್ಮನೂ ತನ್ನ ಪರಿಚಯ ಹೇಳಿ ತಾನು ಯಾರ ಸೊಸೆ, ಯಾರ ಹೆಂಡತಿ ಎಂದೆಲ್ಲಾ ಹೇಳಿದಾಗ, 'ನಮಗೆ ದೂರದ ಸಂಬಂಧಿಯೇ ಆಗಬೇಕು ನೀವು' ಎಂದೆ. ಹೌದು ಹೌದು ಎಂದು ನಕ್ಕರು. ನಾನು ಎಲ್ಐಸಿಯಲ್ಲಿದ್ದೆ ಎಂದಾಗ ಆಕೆಯ ತಂಗಿ ''ನನ್ನ ಗಂಡನೂ ಎಲ್ಐಸಿಯಲ್ಲೇ ಇದ್ದಾರೆ. ಅಲ್ಲಿ ಕಾರಿನಲ್ಲಿ ಕೂತಿದ್ದಾರೆ ನೋಡಿ'' ಎಂದಳು. ನನಗೆ ಆತನ ಪರಿಚಯವಿರಲಿಲ್ಲ. ಬೇರೆ ಯಾವುದೋ ಬ್ರಾಂಚಿನಲ್ಲಿದ್ದರಂತೆ. ನನ್ನ ಜೋಳಿಗೆಗೆ ಕೈ ಹಾಕಿ ''ನಿಮಗೆಲ್ಲಾ ಕನ್ನಡ ಓದಲು ಬರುತ್ತದೆಯೇ'' ಎಂದೆ. ''ಹೌದಪ್ಪಾ ನಮಗೆ ಓದುವುದೆಂದರೆ ಬಹಳ ಇಷ್ಟ ಯಾಕೆ?'' ಎಂದಳು. ''ನಾನು ಓದುವುದೆಂದರೆ ಬಹಳ ಇಷ್ಟ ಯಾಕೆ?' ಎಂದಳು. ''ನಾನು ಕೆಲವು ಪುಸ್ತಕ ಕೊಡುತ್ತೇನೆ. ನೀನು ಓದುವುದಾದರೆ'' ಎಂದೆ. 'ಖಂಡಿತಾ ಒದುತ್ತೇವೆ' ಎಂದಳು–ನನ್ನ ಕೈಯಲ್ಲಿದ್ದ ಆರು ಪುಸ್ತಕಗಳನ್ನು ಕೊಟ್ಟೆ, ''ಸಂತೋಷವಾಯಿತು – ಖಂಡಿತ ಓದುತ್ತೇನೆ'' ಎಂದಳು ಇವನ್ನು ಮಲೇಶ್ಯಾಕ್ಕೂ ತೆಗೆದುಕೊಂಡು ಹೋಗಿ ಓದುತ್ತೇನೆ ನನ್ನ ಸ್ನೇಹಿತರಿಗೂ ಕೊಡುತ್ತೇನೆ'' ಎಂದಳು. ಇನ್ನು ಸ್ವಲ್ಪ ಪುಸ್ತಕ ಕೊಡೋಣವೆಂದರೆ ನನ್ನ ಚೀಲ ಖಾಲಿಯಾಗಿತ್ತು. ''ಮಲ್ಲೇಶ್ಯಕ್ಕೆ ಬಂದರೆ ನಮ್ಮ ಮನೆಗೂ ಬನ್ನಿರಿ'' ಎಂದಳು. ''ಅದೆಲ್ಲ ಆಗುಹೋಗುವ ಕೆಲಸವಲ್ಲ, ನೀವು ನಮ್ಮ ಮನೆಗೆ ಬನ್ನಿ'' ಎಂದೆ. ''ಎಷ್ಟಾದರೂ ನಾವು ಕೂಡಾ ಸಂಬಂಧಿಗಳೇ ಅಲ್ಲವೇ'' ಎಂದ. ''ಹೌದು ಹೌದು. ಹೀಗೆ ಕೆದಕುತ್ತಾ ಹೋದರೆ ಬುಶ್, ಒಬಾಮಾ, ಲಾಡನ್ ಎಲ್ಲರೂ ನಮ್ಮ

ಸಂಬಂಧಿಗಳೇ ಆಗುತ್ತಾರೆ. ಎಷ್ಟಾದರು ನಾವು ವಿಶ್ವ ಕುಟುಂಬಗಳೇ ಅಲ್ಲವೇ?'' ಎಲ್ಲರೂ ನಕ್ಕರು – ನನ್ನ ಮೀಸೆ ಬಿಳಿಯಾಗಿದ್ದನ್ನು ನೋಡಿ ಎಲ್ಲರೂ ನನ್ನ ಕಾಲು ಮುಟ್ಟಿದರು.

ಯಾರು ಹೇಳಿದ್ದು ಓದುವವರಿಲ್ಲ ಎಂದು? ಸರಿಯಾದ ಜನರನ್ನು ಗುರುತಿಸಿ ಸರಿಯಾದ ಪುಸ್ತಕಗಳನ್ನು ವಿತರಿಸಿದರೆ ಜನ ಓದಿಯೇ ಓದುತ್ತಾರೆ.

ಅವರು ಚದರಿದರು – ನಾವು ಕಾರು ಹತ್ತಿದೆವು ಕಾರು ಸ್ಟಾರ್ಟ್ ಆಗುವಾಗ ಆ ಚೆಂದದ ಅತ್ತಿಗೆ ಓಡಿ ಬಂದು 'ಪುಸ್ತಕದ ದುಡ್ಡು' ಎನ್ನುತ್ತಾ, ಒಂದಷ್ಟು ನೋಟುಗಳನ್ನು ನನ್ನ ಕೈಗೆ ತುರುಕಿದಳು. 'ಚಿಲ್ಲರೆ ನಿಮ್ಮಲ್ಲೇ ಇರಲಿ' ಎಂದು ಉತ್ತರಕ್ಕೂ ಕಾಯದೆ ಮದುವೆ ಹಾಲ್‌ಗೆ ಓಡಿದಳು. ನಮ್ಮ ಮಕ್ಕಳೆಲ್ಲ ಹೇಳಿದ್ದು ಕೇಳಿಸಿತು 'ಅಪ್ಪನಿಗೆ ಇವತ್ತು ಧನಲಾಭ'

ಸಂಬಂಧ ಅಂದರೆ ಹೀಗೆ!






ನೀನು ಪತ್ರಕೋದ್ಯಮಿ ಅಂತ ಗೊತ್ತು,... ಜೀವನಕ್ಕೆ ಏನು ಮಾಡ್ತಿದಿ ಅಂತ ಕೇಳ್ದೆ!!

# ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯಲೇಖನ ಸ್ಪರ್ಧೆ (2008) ಫಲಿತಾಂಶ

ಕೊರವಂಜಿ ಅಪರಂಜಿ ಟ್ರಸ್ಟ್ ಆಯೋಜಿಸಿದ್ದ ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯ ಲೇಖನ ಸ್ಪರ್ಧೆ – 2008ರಲ್ಲಿ ಈ ಕೆಳಕಂಡ ಲೇಖನಗಳಿಗೆ ಬಹುಮಾನ ಬಂದಿದೆ. ಬಹುಮಾನಿತ ಲೇಖಕರಿಗೆ ವೈಯಕ್ತಿಕವಾಗಿ ಪತ್ರ ಬರೆದು ತಿಳಿಸಿ ಬಹುಮಾನದ ಮೊತ್ತವನ್ನು ಅವರಿಗೆ ಕಳುಹಿಸಲಾಗುವುದು.

| | | |
|---|---|---|
| ಮೊದಲ ಬಹುಮಾನ ರೂ. 1000/- | ಮುಧೋಳದ ಬೀಸೋಕಲ್ಲು | ಸುಪ್ರಿಯಾ ಪ್ರಾಣೇಶ ದೇಶಪಾಂಡೆ, ಬೆಳಗಾವಿ |
| ಎರಡನೇ ಬಹುಮಾನ ರೂ. 750/- | ಜೇಬಾಯಣ | ಪ್ರಭಾಮಣಿ ನಾಗರಾಜ್, ಮೈಸೂರು |
| ಮೂರನೇ ಬಹುಮಾನ ರೂ 500/- | ಮಕ್ಕಳಿದ್ದಾರೆ ಎಚ್ಚರಿಕೆ | ಮುಳಿಯ ಸರಸ್ವತಿ, ಮೈಸೂರು |

## ಮೆಚ್ಚುಗೆ ಪಡೆದ ಲೇಖನಗಳು

| | |
|---|---|
| ಏ... ನನ್ನ ಗುಲಾಬಿ | ಜಯದೇವ ಪ್ರಸಾದ, ಉಡುಪಿ |
| 'ಗಜನಿವಾಸ' ಗೃಹಪ್ರವೇಶ | ದಿನೇಶ್ ಕುಂದರ್, ನೆಟ್ಟಣ (ಪುತ್ತೂರು) |
| ನನ್ನ ಮೊದಲ ಬಿಳಿಗೂದಲು | ಡಾ. ಕೆ.ಎಸ್.ಎನ್. ಉಡುಪ, ಸುಬ್ರಮಣ್ಯ |

ಬಹುಮಾನ ಪಡೆದ ಲೇಖನಗಳನ್ನು ಮತ್ತು ಮೆಚ್ಚುಗೆ ಪಡೆದ ಲೇಖನಗಳನ್ನು ಅಪರಂಜಿ ಹಾಸ್ಯ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ತೀರ್ಪುಗಾರರು : ಶ್ರೀ ವಸುಧೇಂದ್ರ ಮತ್ತು ಆರ್.ಶೇಷಗಿರಿ

# ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯ ಲೇಖನ ಸ್ಪರ್ಧೆ-2008

ತೀರ್ಪುಗಾರರ ಅಭಿಪ್ರಾಯ

ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯ ಲೇಖನ ಸ್ಪರ್ಧೆಗೆ ಬಂದ ಪ್ರವೇಶಗಳಲ್ಲಿ ಸುಮಾರು 50 ಲೇಖನಗಳನ್ನು ನಮಗೆ ನೀಡಲಾಗಿತ್ತು. ಇದರಲ್ಲಿ ಸಾಕಷ್ಟು ಹಿರಿಯರು ಮತ್ತು ಕಿರಿಯರು ಭಾಗವಹಿಸಿದ್ದರು. ಆದರೆ ಕೇವಲ ಲೇಖನದ ಗುಣಮಟ್ಟವನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಆಯ್ಕೆಯನ್ನು ಮಾಡಲಾಗಿದೆ.

ಸ್ಪರ್ಧೆಗೆ ಬಂದ ಲೇಖನಗಳಲ್ಲಿ ಲಲಿತ ಪ್ರಬಂಧಗಳು, ಹಾಸ್ಯ ಲೇಖನಗಳು, ಕಥಾರೂಪಿ ಹಾಸ್ಯ ಸನ್ನಿವೇಶಗಳು ಎಲ್ಲವೂ ಇದ್ದವು. ಪುರುಷರಷ್ಟೇ ಸಂಖ್ಯೆಯಲ್ಲಿ ಮಹಿಳೆಯರೂ ಈ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನ ಗಳಿಸಿರುವುದು ಸಂತಸ ತಂದಿದೆ. ಮಹಿಳೆಯರ ಲೇಖನಗಳಲ್ಲಿ ಹೆಚ್ಚಿನ ವೈವಿಧ್ಯ ಕಂಡು ಬಂದಿತು.

ಬಂದ ಲೇಖನಗಳಲ್ಲಿ ಉತ್ತಮ ಹಾಸ್ಯ ಕಂಡು ಬಂದರೂ, ಸಾಕಷ್ಟು ಜನರ ಹಾಸ್ಯದ ಪರಿಕಲ್ಪನೆಯೇ ತಪ್ಪೆನ್ನಿಸುತ್ತದೆ. ಹಾಸ್ಯ ಸರಳವಾಗಿರಬೇಕು, ನೈಜವಾಗಿರಬೇಕು. ಆದರೆ ತುಂಬಾ ಜನ ಉತ್ಪ್ರೇಕ್ಷೆಯಿಂದ ಹಾಸ್ಯ ಮೂಡಿಸಲು ಹೋಗಿ ಸೋತಿದ್ದಾರೆಂದೆನ್ನಿಸುತ್ತದೆ. ಅಥವಾ ಈಗಾಗಲೇ ರೂಢಿಯಲ್ಲಿರುವ ಕ್ಲೀಷೆ ಸಂಗತಿಗಳಾದ ದುರಾಸೆಯ ಘಟವಾಣಿ ಪತ್ನಿ, ಅವಳ ಅಸಹಾಯಕ ಗಂಡ, ಭಾಷೆಯಲ್ಲಿ ಹಕಾರಕ್ಕೆ ಅಕಾರನ್ನು ಬಳಸುವ ವ್ಯಕ್ತಿ, ಹೆಂಡತಿಯಿಲ್ಲದಾಗ ಅಡಿಗೆ ಮಾಡಲು ಹೋಗಿ ಪೇಚಿಗೆ ಬೀಳುವ ಗಂಡ ಮುಂತಾದವುಗಳಿಂದ ಹಾಸ್ಯ ಮೂಡಿಸಲು ಒದ್ದಾಡಿದ್ದಾರೆ. ಬದುಕಿನಲ್ಲಿ ನಮ್ಮ ಕಣ್ಣ ಮುಂದೆ ನಡೆಯುವ ಹಾಸ್ಯವನ್ನು ಗಮನಿಸುವಂತಹ, ಅದನ್ನು ಸವಿಯುವಂತಹ ವ್ಯಕ್ತಿತ್ವವನ್ನು ನಾವು ಬೆಳಸಿಕೊಳ್ಳದೆ ಒಳ್ಳೆಯ ಹಾಸ್ಯಲೇಖನ ಬರೆಯುವುದು ಕಷ್ಟವೆಂದು ನಮ್ಮ ವಿನಮ್ರ ಅನಿಸಿಕೆ.

ಅತ್ಯಂತ ಸರಳವಾಗಿದ್ದರೂ ತುಂಬಾ ಸೊಗಸಾಗಿ ಮತ್ತು ನೈಜವಾಗಿ ಬೀಸೋಕಲ್ಲನ್ನು ಮತ್ತೊಂದು ಊರಿಂದ ತರುವ ಪೇಚಿನ ಸಂಗತಿಯನ್ನು ಲಾಲಿತ್ಯದಿಂದ ನಿರೂಪಿಸುವ ಮುಧೋಳದ ಬೀಸೋಕಲ್ಲು ನಮಗೆ ಒಳ್ಳೆಯ ಹಾಸ್ಯಲೇಖನವಾಗಿ ಕಂಡಿದೆ. ಭಾಷೆ ಮತ್ತು ಪದಗಳ ವಿಶಿಷ್ಟ ಬಳಕೆಯಿಂದ ಬರೆದ ಲೇಖನ ಏ-ನನ್ನ ಗುಲಾಬಿ ಇಷ್ಟವಾಯ್ತು. ಸಾಂಪ್ರದಾಯಿಕವಾಗಿ ಜೇಬಿನ ಬಗ್ಗೆ ಲವಲವಿಕೆಯಿಂದ ಬರೆದ ಲಲಿತ ಪ್ರಬಂಧ ಜೇಬಾಯಣ ತನ್ನ ನವಿರುಹಾಸ್ಯದಿಂದ ನಮ್ಮ ಗಮನ ಸೆಳೆಯಿತು. ಮಕ್ಕಳಿದ್ದಾರೆ ಎಚ್ಚರಿಕೆ ಮತ್ತು ಗಜನಿವಾಸ ಗೃಹಪ್ರವೇಶ ಲೇಖನಗಳನ್ನು ಬರೆಯುವಾಗ ಇನ್ನಷ್ಟು ಕಾಳಜಿ ವಹಿಸಬೇಕಿತ್ತು ಎಂದೆನ್ನಿಸಿದರೂ ನಮ್ಮ ಮೆಚ್ಚುಗೆಯನ್ನು ಪಡೆದವು.

ಇಂತಹ ಅಪರೂಪದ ಸ್ಪರ್ಧೆಯನ್ನು ನಡೆಸಿದ ಅಪರಂಜಿ ಬಳಗಕ್ಕೂ, ಸ್ಪರ್ಧೆಯಲ್ಲಿ ಭಾಗವಹಿಸಿದ ನಾಡಿನ ಮೂಲೆಮೂಲೆಯ ಹಾಸ್ಯಲೇಖಕರಿಗೂ ನಮ್ಮ ಧನ್ಯವಾದಗಳು. ಸ್ಪರ್ಧೆಯಲ್ಲಿ ಬಹುಮಾನ ಪಡೆದವರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

ತೀರ್ಪುಗಾರರು : ಆರ್. ಶೇಷಗಿರಿರಾವ್ ಮತ್ತು ವಸುಧೇಂದ್ರ

ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯಲೇಖನ
ಸ್ಪರ್ಧೆ(2008)ಯಲ್ಲಿ ಪ್ರಥಮ ಬಹುಮಾನ ಪಡೆದ ಲೇಖನ

# ಮುಧೋಳದ ಬೀಸೋಕಲ್ಲು ಒಳ್ಳುಗಳು

**- ಸುಪ್ರಿಯಾ ಪ್ರಾಣೇಶ ದೇಶಪಾಂಡೆ**

ನಿಮಗ ಯಾರರೆ ಯಾವೂರವರು ಅಂತ ಕೇಳಿದರ ನೀವು ಗೋಕಾಕದವರು ಅಂದಾಗ ಅವರು ನಮಗ ಅಲ್ಲಿ ಕರ್ದಂಟ ತಂದು ಕೊಡ್ರಿ ಅಂತಾರ. ನೀವು ಅದಕ್ಕೆನರಿ ಅಷ್ಟ್ಯಾಕ ಭಿಡೆ ಮಾಡಕೋತೀರಿ ತಂದ ಕೊಡತೇನಿ ಅಂತೀರಿ. ಹಂಗ ಧಾರವಾಡದವರ್‍ಯಾರಿಗರೆ ಫೇಡೆ ತಂದಕೊಡ್ರಿ ಅಂದರ ಒಳ್ಳೆ ಖುಷಿಯಿಂದ ಲೈನ ಬರ್ಘೂರದಾಗ ಪಾಳಿ ಹಚ್ಚಿ ನಿಂತು ತಂದ ಅವರ ಮನಿಗೆ ಮುಟ್ಟಸತೀರಿ. ಅವರಿಗೂ ಸಂತೋಷ ಆಗತದ. ತಂದದ್ದಕ್ಕೆ ನಿಮಗೂ ಖುಷಿಯಾಗ್ತದ. ಆದರ ಇಂಥ ಅನುಭವ ನನಗೂ ಆಗೇದ ಅದು ನಿಮ್ಮಂಗಲ್ಲ ಅದೊಂದ ದೊಡ್ಡ ಕಥೀನ ಆಗೇದ ಅದನ್ನ ನಿಮ್ಮ ಮುಂದ ಬಿಚ್ಚಿಡತೇನಿ ಓದ್ರಿ.

ನಾನ ನನ್ನ ಯಜಮಾನರು ಬೆಳಗಾವಿಯೊಳಗಿರುವಂಥ ಒಬ್ಬ ಪರಿಚಯದವರ ಕಮಲಮ್ಮನ ಮನೆಗೆ ಹೋಗಿದ್ದೆವು. ಆ ಮಾತು ಈ ಮಾತು ಆಡತಾ ನೀವು ಯಾವೂರವರಿ ಅಂತ ನಮ್ಮನ್ನ ಕೇಳಿದರು. ನಾವು ಈಗಿನ ಬಾಗಲಕೋಟ ಜಿಲ್ಲೆಯ ಮುಧೋಳದವರಿ ಅಂತ ಹೇಳಿದೆವು. ಹೇಳೋದೊಂದ ತಡ ಅವರು "ಅಯ್ಯ! ಇಲ್ಲೇ ಇದ್ದು ನೀವು ಮುಧೋಳದವರು ಅಂತ ಗೊತ್ತಿದ್ದಿದಿಲ್ಲ ನೋಡ್ರಿ. ಅಲ್ಲೇ 'ಬೀಸೋ ಕಲ್ಲು, ಒಳ್ಳು' ಭಾಳ ಚಲೋ ಸಿಗತಾವಂತ ನೀವು ಹ್ಯಾಂಗೂ ಈಗ ದೀಪಾವಳಿ ಹಬ್ಬಕ್ಕ ಮುಧೋಳಕ್ಕೆ ಹೊಂಟೀರಿ ತಂದ ಕೊಡ್ರಿ". ತಿಂಗಳದಾಗ ಮಗಳ ಮದಿವಿ ಠರಾಸೇವು ಒಳಕಲ್ಲ ಪೂಜಾಕ ಕಲ್ಲು ಒಳ್ಳು ಇದ್ದರೆ ಛೆಂದ ನೋಡ್ರೆವಾ. ಮೊನ್ನೆ ಒಬ್ಬರ ಮದಿವಿಗೆ ಹೋಗಿದ್ದೆವು ಅಲ್ಲಿ ಮಿಕ್ಸರ ಗ್ರ್ಯಾಂಡರ ಪೂಜಾ ಮಾಡಿದರು. ಪೂಜಾ ಮಾಡು ಹೊತ್ತನ್ಯಾಗ ಕರೆಂಟೊಂದ ಹೋದು ನೋಡ್ರಿ ಅದಕ್ಕ ಹಿಂತದೆಲ್ಲ ಅಗೂದ ಬ್ಯಾಡ ಅಂತ ನಿಮ್ಮೂರಿಂದ ಕಲ್ಲು ಒಳ್ಳು ತಂದ ಕೊಡ್ರವಾ" ಅಂತ ತಮ್ಮದೇನ ಹೇಳೂದದ ಅದನ್ನ ಹೇಳಿದರು.

"ನನಗ ಗೊತ್ತಿತ್ತು ಕಲ್ಲು ಒಳ್ಳು ತರೂದು ಎಷ್ಟು ತ್ರಾಸೀಂದು ಅಂತ. ಹ್ಯಾಂಗರೆ ಮಾಡಿ ಮಾತ ಮರಸಬೇಕು ಅಂತ ನಾ ನಡೆಸಿದರ ನಮ್ಮೆಜಮಾನರು ಸುಮ್ಮ ಕೂಡಬೇಕಲಾ. ಅದಕ್ಕೇನರೀ ಒಳೇ ತಂದ ಕೊಡತೇವಿ ಮತ್ತಲ್ಲದ ಅವರಿಗೆ ಕೇಳತಾರ ಎಷ್ಟ ಸಟ್ಟ್ ತರಲಿ ಅಂತ ಅವರು ಒಂದ ಒಳ್ಳು ಕಲ್ಲು ಸಾಕರಿ ಅಂದರು ಇವರ ಅದಕ್ಕ ಒಪ್ಪಗೊಂಡ ಬಂದರು."

ಮನೀಗೆ ಬಂದೀವಿ ನನಗೂ ಭಾಳ ಸಿಟ್ಟ ಬಂದಿತ್ತು. ಅಲ್ರಿ ಕಲ್ಲು ಒಳ್ಳು ಅಂದರ ಚುನಮುರಿ ಪುಠಾಣಿ ಅಂತ ತಿಳಕೊಂಡಿರೇನ. ಯಾವುದರ ಸೂಟಕೇಸದೊಳಗ ಹಿಡಸತಾವಂತ ಅನಕೊಂಡಿರೋ ಅವನ್ನ ತರೂದು ಎಷ್ಟ ತ್ರಾಸ ಅದ ಅಂತ ನಿಮಗ ಗೊತ್ತಿಲ್ಲ

ಅಂದರ ಎ....ಏ ನೀ ಭಾಳ ಮಾತಾಡಲಿಕತ್ತೀ. ಹ್ಞಾ ಅಲ್ಲಿಂದ ಬಸ್ಸನ್ಯಾಗ ಬರತಾವ ಇಲ್ಲಿಂದ ರಿಕ್ಷಾದಾಗ ಅವರ ಮನೀ ಮುಟ್ಟಿಸಿದರಾತು.

ಹ್ಞೂ.. ಹ್ಞೂ ಮುಟ್ಟಿಸಿದರಾತು ಅವಕೇನ ಕಾಲವಯೇನ ನಾವ ಅವನ್ನ ಎತ್ತಾಡಬೇಕು. ಕಲ್ಲ ಕೊಂಡಮ್ಯಾಲ ನಿಮಗ ಗೊತ್ತ ಆಗತದ ಅಂತ ಇಬ್ಬರದೂ ಸ್ವಲ್ಪ ಝುಗಳಾತು.

ದೀಪಾವಳಿ ಹಬ್ಬಕ್ಕ ಗಂಡ ಹೆಂಡತಿ ಇಬ್ಬರೂ ಮುಧೋಳಕ್ಕ ಹೋದೀವಿ. ನನಗ ಬರೀ ಕಲ್ಲಿಂದ ವಿಚಾರ, ನಮ್ಮತ್ತಿ ಎರಡ ಮೂರ ಸರೆ ಮಾತಾಡಿಸಿದಾಗ ನಾ ಕಲ್ಲಬೇಕಂದ್ರ ಅಂತ ಅನ್ನೂದ ನೋಡಿ ನೋಡಿ ಅವರು ನನ್ನ ಯಜಮಾನರನ್ನ ಕರೆದು ನೋಡಪಾ, ಬೆಳಗಾವಿಗೆ ಹೋದಕೂಡಲೆ ಮೊದಲ ನಿನ್ನ ಹೆಂಡತಿನ್ನ ಡಾಕ್ಟರಿಗೆ ತೋರಿಸು. ಆಕೀ ತಲೀಗೆ ಏನ ಆಗೇದೋ ಏನೋ ಮಾತಾಡಿದರ ಸಾಕ ಕಲ್ಲ ಬೇಕೇನ - ಕಲ್ಲ ಬೇಕೇನ ಅಂತಾಳ ಕಲ್ಲ ತೊಂಗೊಂಡೇನ ತಲೀ ಜಜ್ಜಕೊಳ್ಳಾ ಅಂತ ಅನಕೋತ ನಮ್ಮನ್ನ ಬೆಳಗಾವಿಗೆ ಕಳಿಸಿಕೊಟ್ಟರು, ಮನಿಯಿಂದ ಬಸ್‌ಸ್ಟ್ಯಾಂಡಿಗೆ ಬಂದೀವಿ. ಬಸ್ ತಯಾರಿತ್ತು, ಮುಂದ ಹೋಗಿ ಸೀಟ ಹಿಡಿದ ಲಗೇಜ್ ಇಟ್ಟೇವಿ. ಡ್ರಯವರ ಇಪ್ಪತ್ತ ನಿಮಿಷ ಟಾಯಮ ಅದ ಅಂದ, ಕಲ್ಲು ಒಳ್ಳು ಖರೀದಿ ಮಾಡೂಣು ಅಂತ ಹೋದೀವಿ. ಬಸ್‌ಸ್ಟ್ಯಾಂಡ್ ಕಂಪೌಡವಾಲ ಸುತ್ತಲೂ ಕಲ್ಲ ಕಟ್ಯಾವರ ಕಾಣಸತಿದ್ದರು.

ನನಗ ಆ ಬೀಸೋಕಲ್ಲ ನೋಡಿ ಅವ್ವ ಅಜ್ಜಿ ನೆನಪಾತು. ನಸೀಕನ್ಯಾಗ ಅವರ ಜಾನಪದ ಹಾಡು ಕೇಳೂಹಂಗ ಇರತಿದ್ದು.

ಕಲ್ಲು ಕೊಟ್ಟವ್ವಗ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲ ಮಗ ಬರಲಿ
ಪಲ್ಲಕ್ಕಿ ಮೇಲ ಮಗ ಬರಲಿ ಆ ಮನೆಗೆ
ಮಲ್ಲೀಗೆ ಮುಡಿಯೋ ಸೊಸೆ ಬರಲಿ

ಅಂತ. ಹಾಡ ಹಾಡಕೋತ ನಾಲ್ಕ-ನಾಲ್ಕ ಸೇರ ಅಳ್ಳ ಬೀಸತಿದ್ದರು, ಮುಂಜಾನೆ ನಮಗೆ ಅಳ್ಳಿಟ್ಟ ಬ್ರೆಕ್‌ಫಾಸ್ಟ್ ಈ ನೂಡಲ್ಸ ಟೋಸ್ಟ ಬರ್ಗರ ಬಂದು ನಮ್ಮ ಊಟದ ರುಚಿನ ಕೆಡಸ್ಯಾವ. ಮತ್ತ ಅವರ ಬೀಸುವಾಗ ಹಾಡಿದ ಹಾಡಿನಿಂದ ಮನೀ ವಾತಾವರಣ ಎಷ್ಟು ಆಹ್ಲಾದಕರವಾಗತಿತ್ತು ಅಂತ ಅನಿಸದೇ ಇರಲಿಲ್ಲ. ಟಿ.ವಿ. ಬಳಸುವ ಇಂದಿನ ಜನರಿಗೆ ಸುಖ ಗೊತ್ತಾಗೋದೆ ಇಲ್ಲ ಅಂತ ಹಳಹಳಿಯಾ ಆಯಿತು. ಜೊತೆ ಜೊತೆಗೆ ನಮ್ಮ ಅವ್ವ ನನ್ನನ್ನೂ ಬೀಸಲಿಕ್ಕೆ ಹಿಡಿಸಿಗೊಳ್ಳೋದು ಮತ್ತು ಕುಟ್ಟಲಿಕ್ಕೆ ಹಚ್ಚುತ್ತಿದ್ದಳು. ನಾನು ಸಿನೇಮಾಕ್ಕ ಹೋಗತೇನವಾ, ಗೆಳತೀ ಮನೀಗೆ ಹೋಗತೇನವಾ ಅಂತ ತಪ್ಪಿಸಿಕೊಳ್ಳಲಿಕ್ಕೆ ನೋಡತಿದ್ದೆ ಇದೊಂದು ಅನುಭವ ನನ್ನ ಮನಸಿನೊಳಗ ಅಚ್ಚ ಒತ್ತಿದಂಗಿರುವದು. ಆದರ ಈಗ ಒಯ್ಯಬೇಕಾದ ಈ ಕಲ್ಲು ಒಳ್ಳು ಎಷ್ಟು ಅಚ್ಚವತ್ತದೋ ಅಂತ ವಿಚಾರ ತಲ್ಯಾಗ ಸುಳುದು ಸ್ವಲ್ಪ ಅಧೈರ್ಯ ಆದರೂ ಗಂಡ ಹೆಂಡತಿ ಕೂಡಿ ಕಲ್ಲ ಕಟಿಯೋ ಒಡ್ಡರ ಹತ್ತಿರ ಹೋದಿವಿ.

ಅವರು ಕಲ್ಲ ಕಟಿಯೋ ಶ್ಯಾಣ್ಯಾತನಕ, ಅವರು ಪಡ್ಯೋ ಪರಿಶ್ರಮಕ ನಾವ ಕೊಡೋ ರೊಕ್ಕ ಏನೂ ಅಲ್ಲ ಅಂತ ಅನಿಸಿ ಭಾಳ ಜಿಗ್ಗಿರಿ ಮಾಡದ ಕಲ್ಲು ಒಳ್ಳ ಖರೀದಿ ಮಾಡಿದೆವು. ನಾನಂದೆ ನಮ್ಮೆಜಮಾನರಿಗೆ "ನೀವು ಈ ಒಳ್ಳ ಬಸ್ಸನ್ಯಾಗ ಇಡನಡ್ರಿ ನಾನು ಈ ಬೀಸೋ

ಕಲ್ಲಿನ ಮೇಲಿನ ಭಾಗ ತರತೀನಿ ಇದರ ಕೆಳಗಿನ ಭಾಗ ಈ ಕಲ್ಲ ಕಟ್ಯಾವ ತರತಾನ'' ಆವಾಗ ನಮ್ಮೆಜಮಾನರು ಆ ಕಲ್ಲ ಹ್ಯಾಂಗ ಕುತ್ತಿತ್ತಲ್ಲ ಅದರ್ಹಂಗ ಅದರ ಮುಂದ ಕುತ್ತಿದ್ರು.

''ಏನ್ರಿ ಎತ್ರಿ ಬಸ್ಸ್ ಹೋಗತದ ಅಂದರ ಅದಕ್ಕ ಅವರು ಆಲ್ಲ ಅದು ಅಳಗ್ಯಾಡವಲ್ಲತು ಅಂತ ಆನಬೇಕ! ನಾ ಅಂದೆ ನೀವ ಅಳಗ್ಯಾಡಸಿದರ ಅದು ಅಳಗ್ಯಾಡತದ. ಈ ಸಂಭಾಷಣೆಯನ್ನು ಕೇಳಿಸಿಕೊಂಡು ಕಲ್ಲ ಕಟ್ಯಾವನ ಹೆಂಡತಿ ''ಯಪ್ಪಾ ನಾ ಹಿಡೀತೀನಿ ನಿಂದ್ರ'' ಅನಕೋತ ವೇಟ ಲಿಪ್ಟಿಂಗ್ ಮಾಡೋ ಕರ್ಣಂ ಮಲ್ಲೇಶ್ವರಿ ಹಂಗ ಎತ್ತೇ ಬಿಟ್ಳು. ನನಗ ಗೊತ್ತಾತು ನನ್ನ ಗಂಡ ಆ ಕಲ್ಲೀಗೆ ಬರೀ ಕೈ ಹಚ್ಯಾನ ಅಂತ. ಅಂತು ಇಂತೂ ಕಲ್ಲು ಒಳ್ಳು ಬಸ್ಸನ್ಯಾಗ ಬಂದು'' ಬಸ್ಸಿನ ಬಾಗಲದಾಗ ಇಟ್ಟು ನಾ ಸೀಟ ಹಿಡದಲ್ಲೇ ಮುಂದ ಹೋದೆ. ಏನ್ರಿ ಮಗಳ್ನ ಅಲ್ಲೆ ಬಿಟ್ಟ ಬಂದೇವಿ ಅಂತ ಅಂದ್ರ ಅಲ್ಲ ನಿನಗ ಬಗಲಾಗ ಕರಕೊಂಡ ಬಂದಲ್ಲಾ ಅಂತಾರ ನಾ ಅಂದೆ ಕಲ್ಲ ಯತ್ಯಾಡ್ಯೋದರಾಗ ನಿಮಗ ಟೆನ್ಷನ್ ಆಗೇದ ಅನಸತದ ಅಲ್ಲೇ ಆಡತಿತ್ತ ನೋಡ್ರಿ. ಹೋಗಿ ಕರಕೊಂಡ ಲಗೂ ಬರ್ರಿ ಅಂತ ಅನಕೋತ ಕಲ್ಲ ಎತ್ಯಾಡಿದ್ದಕ್ಕೊ, ಬಯಲ ಸೀಮಿ ಬಿಸಿಲಿನ ಝಳಕ್ಕೋ ಮೈಯಲ್ಲಿ ಸ್ನಾನಾ ಮಾಡಿದವರಂಗ ಬೆವರ ತುಂಬಿತ್ತು. ಅದನ್ನ ಒರಸಿಗೋತ ಉಸ್ಸೆಂದ ಅನಿಸಿಗೊಂಡ ಕೂತೆ.

''ಅಷ್ಟರೊಳಗ ಬಸ್ಸನ್ಯಾಗ ಕಂಡೆಕ್ಟರ ಬಂದ, ಬಂದವನ ಹಾದ್ಯಾಗಿನ ಕಲ್ಲ ಎಡವಿ ಯಾರೂರಪಾ ಇವು ಒಳಗ ನಿಮ್ಮ ಸೀಟ ಕೆಳಗ ಸರಿಸಿಗೋರಿ. ತೂಗಾಡೋ ಬಸ್ಸನಾಗ ಎಡವಿ ಬಿದ್ದರ ಹಲ್ಲ ಮುರಿತಾವ ಹ್ಞಾ. ಟಿಕೆಟ... ಟಿಕೆಟ ಅನಕೋತ ಮುಂದಿನ ಸೀಟ ಹತ್ತಿರ ಬಂದ. ಟಿಕೆಟ ಕೊಡಲಿಕತ್ತಾ. ಅಲ್ಲಿದ್ದಾವ ಯಾವನೋ ಪುಣ್ಯಾತ್ಮಾ ಆ 'ಕಲ್ಲ ಒಳ್ಳು' ತಂದ ನಡವ ಇಟ್ಟ ಡ್ರೈವರ ಬಸ್ ಸ್ಟಾರ್ಟ ಮಾಡಿದ ನಮ್ಮೆಜಮಾನರ ಮಗಳ್ನ ಕರಕೊಂಡ ಲಗೂ ಲಗೂ ಬರಕೋತ ಹಾದ್ಯಾಗಿನ ಕಲ್ಲ ಎಡವಿ ಎರಡ ಹೆಜ್ಜಿ ಲಗೂನ ನನ್ನ ಹತ್ರ ಬಂದ ಕೂತರು. ಕಂಡಕ್ಟರ ಮುಂದಿನ ಸೀಟಿಗಳಿಗೆ ಟಿಕೆಟ ಕೊಟ್ಟ ಹಿಂದ ಕೊಡಬೇಕಂತ ಹೊಂಟಾವ ಮತ್ತ ಹಾದ್ಯಾಗಿನ ಕಲ್ಲ ಎಡವಿ, ನವ್ವನ ಯಾರ ಇಟ್ಟರಿ ಇವನ ಬಸ್ಸನ್ಯಾಗ ಯಂಥೆಂತಾ ಸಾಮಾನ ತರತೀತಿ ಅಂತ ಬಯ್ಯಕೋತ ಹೋದ. ನಾವ ಕೇಳಿಸೂ ಕೇಳಸಲಾರದಂಗ ಸುಮ್ಮನ ಕೂತಿದ್ದಿವಿ. ಸ್ಟಾಪಿಗೆ ಒಮ್ಮೆ ಜನಾ ಹತ್ತೋದು ಇಳಿಯೋದು ನಡದ ಇತ್ತು. ಕಲ್ಲ ಎಡುವಿದವರೆಲ್ಲ ಹಿಡಿ ಶಾಪ ಹಾಕಾವರ ನಾವು ಕೇಳಸಲಾರದ್ಹಂಗ ಖಿಡಕಿ ಕಡೆ ಮುಖ ಮಾಡಿ ಕಳ್ಳರಂಗ ಸಮ್ಮನ ಕೂತಿದ್ದೆವು.''

ಬಸ್ಸ್ ಫುಲ್ ಆತು. ಕಲ್ಲ ಹತ್ತರ ಐವತ್ತು, ಐವತ್ತೈದರ ವಯಸ್ಸಿನ ಸಮೀಪದ ಹೆಣ್ಣ ಮಗಳು ನಿಂತಿದ್ದಳು. ಆಕಿಗೆ ಸರಿಯಾಗಿ ನಿಲ್ಲಿಕೆ ತೊಂದರೆ ಆಗುತ್ತಿತ್ತು ಯಾಕಂದರೆ ಕಾಲಾಗಿಟ್ಟ ಕಲ್ಲಿನಿಂದ ಮುಂದ ಹಿಂದ ಸರೀಲಿಕ್ಕೆ ತೊಂದರೆಯಾಗಿತ್ತು. ಆ ಹೆಣ್ಣಮಗಳು, ಅಲ್ಲೆ ಕೂತಂಥ ಒಬ್ಬ ಹರೇದ ಹುಡುಗಗ ಈ ಕಲ್ಲ ಒಂದೀಟ ಒಳಗ ಸರಿಸಿಗೋಪಾ ನಾ ಇಲ್ಲಿ ಚೆಂದಾಗಿ ನಿಂದರತೇನಿ ಅಂತ ಅಂದಳು. ಆ ಮನಶ್ಯಾ ಕೇಳಸಲಾರದಂಗ ಮಾಡಿ, ಕಣ್ಣ ಮುಚ್ಚಿ ನಿದ್ದಿ ಹತ್ತಿದವರ್ಹಂಗ ನಾಟಕ ಮಾಡಲಿಕತ್ತಿದ್ದ. ಈ ಬಾಯಿ ಬಿಡಬೇಕಲಾ. ಅವನ್ನ ಅಳಗ್ಯಾಡಿಸಿ ''ಏ ಯಪ್ಪಾ ಇವನ್ನ ಒಂದೀಟ ನಿನ್ನ ಸೀಟ ಬಡ್ಯಾಗ ಸರಸಿಗೋಪಾ'' ಅಂತ ಎಬ್ಬಿಸಿದಳು.

ಆವ ಭಾದ್ದೂರ ಎತ್ತಲಿಕ್ಕೆ ಆಗೂದಿಲ್ಲ ಅನ್ನುದ ತೋರಸಬಾರದಂತ್ಹೇಳಿ ಯತ್ತಿ ಕೈಯಾಗಿನ ಚರಗಿ ಕೆಳಗ ಇಟ್ಟ ಬಂದೀನೋಡಬೆ ಇನ್ನ ಈ ಕಲ್ಲ ಸರಸೀದ್ರೆಂದರ ಬಸ್ಸ್

ನಿಂದರಸಬೇಕಾಗತ್ತೈತಿ. ಆಕಿ ಉತ್ತರಕ್ಕೂ ಕಾಯದ ಅವಾ ಮತ್ತ ಕಣ್ಣ ಮುಚ್ಚಿ ಕೂತ. ಆ ಹೆಣ್ಣಮಗಳೂ ಬೆರಕಿ ಅದ ಕಲ್ಲಮ್ಯಾಲ ಸಸ್ತಾಗಿ ಕೂತಳು.

ಹೊಳ್ಳಿ ನೋಡಿದ ನನಗೆ ಆ ಕಲ್ಲ ಮ್ಯಾಲ ಕೂತಾಕಿನ್ನ ನೋಡಿ ಏನೋ ತಲ್ಯಾಗ ಹೊಳಿತು. ನಿದ್ದಿ ಹೊಡಕೋತ ತೂಗ್ಯಾಡಕೋತ ಕೂತಂಥ ಇವರನ್ನ ಎಬ್ಬಿಸಿದೆ. ರೀ... ಏನ್ರಿ, ಇವರಿಗೆ ಮಲಕೊಂಡಾಗ ಎಬ್ಬಿಸಿದರ ಭಾಳ ಸಿಟ್ಟು. ಏನ ನಿಂದು ಒಟ್ಟ ನನ್ನ ಮಲಗಿಸಿಕೊಡುದಿಲ್ಲ ಅಂತ ಬೈಕೋತ ಎದ್ದರು.

ಆ ಹೆಣ್ಣಮಗಳು ನಮ್ಮ ಕಲ್ಲ ಮ್ಯಾಲ ಕೂತಾಳ ಅಂದೆ. ಕೂಡಲಿ ಬಿಡು ಅದಕ್ಕೇನು ಅಂದ್ರು. ಅಲ್ರಿ ನಮ್ಮಜ್ಜಿ ಹೇಳತಿದ್ಳು ಯಾರ ಕಲ್ಲ ಮ್ಯಾಲ ಕೂಡತಾರ ಅವರ ಕುಂಡೀಗೆ ಬಕ್ಕಿ ಆಗತಾವ ಅಂತ. ಇವರಿಗೆ ಇನ್ನಷ್ಟ ಸಿಟ್ಟ ಬಂತು. ಎ ಸುಮ್ಮನ ಕೂಡು ನನ್ನೂ ಸುಮ್ಮನ ಮಲಗಿಸಿಕೊಡು ಆದರೆ ಆಕಿಗೆ ಕುರುವು ಆಗತಾವ ನಿನಗಲ್ಲಲಾ ಅಂತ ಘಾಳಿಗೆ ಮುಖ ಒಡ್ಡಿ ಕೂತರು. ನಾನು ಆ ಕಲ್ಲ ಒಮ್ಮೆ ಆ ಹೆಣ್ಣ ಮಗಳ ಮುಖ ಒಮ್ಮೆ ನೋಡಕೋತ ಕೂತೆ.

ಕಲ್ಲ ಮ್ಯಾಲ ಕೂಡುವಾಗ ಆ ಹೆಣ್ಣ ಮಗಳು ಅದರಾಗಿನ ರುಬ್ಬೊ ಗುಂಡಕಲ್ಲ ಕೆಳಗಿಟ್ಟಿದ್ದಳು. ಅದು ಬಸ್ಸ ಯಾವ ಕಡೆ ಹೊಳ್ಳತದ ಆಕಡೆ ಗುಡು...ಗುಡು...ಗುಡು... ಅಂತ ಸಪ್ಪಳ ಮಾಡಕೋತ ಬಸ್ಸ ತುಂಬ ಉಳ್ಳ್ಯಾಡಲಿಕತ್ತು. ಈಗ ಹಂಗೂ ಹಿಂಗೂ ಆ ಕಲ್ಲು ಇಳ್ಳು ನಂದಂತ ಜನರಿಗೆ ಗೊತ್ತಾಗಿತ್ತು. ಆ ಗುಂಡಕಲ್ಲು ಡ್ರೈವರನ ಬ್ರೇಕಿಗೆ ಅನುಸಾರವಾಗಿ ತನ್ನ ಸ್ಥಾನಪಲ್ಲಟ ಮಾಡತಿತ್ತು. ಅದರ ಸಪ್ಪಳಾದ ಕೂಡಲೆ ಜನಾ ನನ್ನನ್ನ ಝೂದಾಗಿನ ಪ್ರಾಣಿ ನೋಡಿದಂಗ ನೋಡಲಿಕತ್ತರು. ಸ್ವಲ್ಪ ಹೊತ್ತಾದ ಮ್ಯಾಲಕ ಸಪ್ಪಳ ಇಲ್ಲದ್ಹಂಗ ಆತು. ಯಾರರೆ ತೊಗೊಂಡ ಹೋದರೋ ಏನೋ ಅಂತ ಎಲ್ಲಾರ ಕಾಲಾಗ ಹುಡಕಾಡಲಿಕತ್ತೆ. ಸ್ಪೀಡಲೆ ಹೊಂಟಂಥ ಬಸ್ಸು ಒಮ್ಮೆಲೆ ನಿಂತಿತು. ಬಸ್ಸು ಪಂಚೇರ ಆತು ಅಂತ ಅನಕೊತ ಅರ್ಧ ಜನ ಕೆಳಗೆ ಇಳಿದರು. ಬಸ್ಸು ಪಂಚೇರ ಆದದ್ದು ಜನ ಕೆಳಗೆ ಇಳಿದದ್ದು ಅನುಕೂಲಾತು ಅನಕೋತ ಗುಂಡಕಲ್ಲ ಹುಡಿಕಿದೆ. ಅದು ಕಂಡಕ್ಟರ ಸೀಟ ಕೆಳಗೆ ಹೋಗಿ ಉಳ್ಳ್ಯಾಡಿದ್ದ ಸಾಕು ಅಂತ ಅನಕೊಂಡ ಮುಕೊಂದಿತ್ತು. ಅದನ್ನ ತಗೊಂಡ ಬಂದ ತೊಡಿಮ್ಯಾಲ ಇಟಗೊಂಡ ಕೂತೆ. ಇವರದು ನಿದ್ದಿ, ಬಸ್ಸನಾಗೂ ಗೊರಕಿ ಏನ ನಡದ ಅದರ ಕಡೆ ಲಕ್ಷನ ಇಲ್ಲ. ಪಂಚೇರ ಅದ ಗಾಲಿ ಬದಲಾಯಿಸಿ ಡ್ರೈವರ ಬಸ್ಸ ಸುರು ಮಾಡಿದ ಬಸ್ಸಿನೊಳಗಿನ ಜನರಿಂದ ಬೈಸಿಕೊಂಡ ನನಗ ಸಾಕಸಾಕಗಿತ್ತು. ಬೆಳಗಾವಿ ಯಾವಾಗ ಬಂದಿತ್ತೊ ಅಂತ ಅನಿಸಲಿಕತ್ತಿತು. ಇನ್ನೊಮ್ಮೆ ಯಾರರೆ ಕಲ್ಲು ಒಳ್ಳು ತಂದಕೊಡ್ರಿ ಅಂದರ ನನ್ನ ಜೋಡಿ ಬಂದಾಗ ತರೂದ ಬಾಡ ನೀವೊಬ್ಬರ ಮುಧೋಳಕ್ಕ ಹೋದಾಗ ಯಾರ ಬೇಡಿರತಾರೋ ಅವರಿಗೆ ತಂದ ಕೊಡ್ರಿ ಅಂತ ಅನ್ನುವಷ್ಟ ಸಿಟ್ಟು ಬಂದಿತ್ತು.

ಅಂತೂ ಇಂತೂ ಬೆಳಗಾವಿ ಬಂತು. ಹತ್ತುವಾಗ ಇದ್ದಂಥ ಜನರ ಗಡಿಬಿಡಿ ಈಗ ಇರಲಿಲ್ಲ. ಹಂಗ್ಯಾಕ ಅಂದರ ಈಗ ಸೀಟ ಹಿಡಿಬೇಕಂತೇನಿರುದಿಲ್ಲ ಸಾವಕಾಶ ಮುಂದಿನವರು ಇಳಿದ ಮ್ಯಾಲ ಅವರಿಕಿಂತ ಸಾವಕಾಶ ಕಲ್ಲು ಒಳ್ಳು ಸರಿಸಿಕೋತ ಬಾಗಿಲ ಕಡೆ ಬರಲಿಕತ್ತೀವಿ. ನಮ್ಮನ್ನ ನೋಡಿ ಕಂಡಕ್ಟರ ಹಿಂಗ ನೀವ ಸರಿಸಿಕೋತ ಹೋದರ ನಾವು ಮುಂದಿನ ಊರ ಮುಟ್ಟೋದ ಯಾವಾಗರಿ ಅಂತ ಅನಕೋತ ಭಡಾ ಭಡಾ ಬಂದ ಕಲ್ಲ ಹೊಂಗ ಇಕ್ಕಿರಿಸಿ ರಪ್ಪ ಅಂತ

ಬಾಗಲಾ ಹಾಕೊಂಡ ರೈಟ ಅಂದ. ಆವ ಏನ ಅನ್ನಲಿ ಪಾಪ ಕಂಡಕ್ಟರ ಭಲೋ ಮನಸ್ಯಾರಿ, ಒಳಗಿಂದ ಒಜ್ಜಾ ಕಲ್ಲು ಒಳ್ಳು ಎತ್ತಿ ಹೊರಗಿಟ್ಟ ನಮಗ ಭಾಳ ಅನಕೂಲಾತರಿ.

ರಿಕ್ಷಾದವರು ಅಲ್ಲಿ ಸಾಕಷ್ಟು ನಿಂತಿದ್ರು ಆದರ ಯಾರೂ ಬರತೀರೇನರಿ ಅಂತ ಕೇಳಲಿಲ್ಲ ಯಾಕಂದರ ಈ ಕಲ್ಲಗಳನ್ನೇನ ತಲೆಮ್ಯಾಲ ಇಟಗೊಂಡ ಹೋಗತಾರೇನ ನಮ್ಮ ಹತ್ರ ಬರತಾರ ಅಂತ ಅವರ ಅನ್ನೂಣಿಕೆಯಾಗಿತ್ತು. ಅವರನ್ನಕೊಂಡ್ಬುಗ ಆತು. ನಾವ ಅವರ ಹತ್ತರ ಹೋಗಿ ಅವರ ಹೇಳಿದಷ್ಟಕ್ಕ ಒಪ್ಪಗೊಂಡು ಎತ್ತಲಾರದ್ದಂತ ಲಗೇಜ (ಕಲ್ಲು .ಒಳ್ಳು) ಅವರ ಸಹಾಯದಿಂದ ರಿಕ್ಷಾದಾಗ ಇರಿಸಿಗೊಂಡ ಮನಿ ಮುಟ್ಟಿದೆವು. ಇಷ್ಟ ಹೊತ್ತು ಮೌನಧಾರಿಗಳಾಗಿದ್ದ ಯಜಮಾನರು ರಿಕ್ಷಾದೊಳಗಿನ ಕಲ್ಲು ಒಳ್ಳುಗಳನ್ನು ಒಳಗೆ ಇಡಿಸಿದರು. ನಾವು ಊರಿಂದ ತೊಗೊಂಡ ಬಂದೀವಿ. ಇವು ಯಾರ ಮನಿ ಸೇರಬೇಕೋ ಅವರ ನಮ್ಮ ಮನೀಗೆ ಬಂದು ತೊಂಗೊಂಡು ಹೋಗಲಿ ಆಂತ ಅನಕೋತ ರಿಕ್ಷಾದವಗ ದುಡ್ಡ ಕೊಟ್ಟ ಕಳಿಸಿದರು.

ಇವರಿಗೂ ಸಾಕ ಸಾಕಾಗಿತ್ತು. ಫ್ಯಾನ ಚಾಲೂ ಮಾಡಿ ನಾನು ಅಲ್ಲೆ ಕುರ್ಚಿ ಮೇಲೆ ಗಾಳಿಗೆ ಮೈಯೊಡ್ಡಿ ಕುಳಿತೆ. ಕಲ್ಲು ಒಳ್ಳು ತರುವ ಅನುಭವ ಹ್ಯಾಂಗಿತ್ತು ಅಂತ ಯಜಮಾನರನ್ನ ಕೇಳಿದೆ. ಎ, ಮಾರಾಳ ಅದರ ನೆನಪ ತಗೀಬ್ಯಾಡ ಅವುಗಳನ್ನ ನೋಡೂದ ಸಹಿತ ಬ್ಯಾಡ ಅಂತ ಕಲ್ಲಗಳ ಕಡೆ ಬೆನ್ನ ಮಾಡಿ ಮಲಗಿದರು. ನನಗ ಒಳಗೊಳಗೆ ಭಾಳ ನಗೀ ಬರಲಿಕತ್ತಿತ್ತು. ಸ್ವತಃ ಅನುಭವ ಆಗಿ ಬುದ್ಧಿ ಬರದ ಹೊರತು ಈ ಗಂಡಸರು ಹೆಂಗಸರ ಮಾತು ಕೇಳಾಗಿಲ್ಲ ಅನ್ನೂದಕ್ಕ ಈ ನನ್ನ ಗಂಡನ ಸಾಕ್ಷಿ ಅನಿಸಿತು.

ಅಷ್ಟರೊಳಗ ಇವರ ಮೊಬಾಯಿಲ ರಿಂಗಾತು. ಅತ್ತ ಕಡೆಯಿಂದ ಒಳ್ಳು ಕಲ್ಲು ಹೇಳಿದ ಕಮಲಮ್ಮನ ಧ್ವನಿ, ದಂಪತಿಗಳಿಗೆ ದೀಪಾವಳಿಯ ಶುಭಾಶಯಗಳು. ಫ್ಯಾನ ಕೆಳಗೆ ಅಡ್ಡಾದಿಡ್ಡಿ ಇವರು ನಿಮಗೆ ಅನಂತ ಅನಂತ ಶುಭಾಶಯಗಳು ಎಂದು ಅನ್ನುತ್ತಾ ಎದ್ದು ಕುಳಿತು ಎರಡೂ ಕೈ ಮುಗಿದರು. ಮತ್ತೆ ಕಮಲಮ್ಮನ ಧ್ವನಿ: ದೀಪಾವಳಿ ಹಬ್ಬ ಮುಗಿಸಿಕೊಂಡು ಬಂದರಾ, ನಮ್ಮ ಕಲ್ಲು ಒಳ್ಳು ತಂದರ್‍ಯಾ, ತಂದಿದ್ರ ನಾಳಿ ಸಂಜಿ ಚಹಾಕ ಇಲ್ಲೇ ಬರ್‍ರಿ. ಬರೂವಾಗ ಆ ನಮ್ಮ ಕಲ್ಲು ಒಳ್ಳು ತೊಗೊಂಡ ಬರ್‍ರಿ ಅಂದರು.

ಇವರಿಗೆ ಬುದ್ಧಿ ಬಂದದ ಅಂತ ಇವರ ಕೊಡೊ ಉತ್ತರದ ಮ್ಯಾಲೆ ಅನಿಸ್ತು, ಅದೇನಂದರಂದ್ರ: ''ನಾನು ನಾಳೆಯಿಂದ ಹತ್ತು ದಿವಸ ಬಿಸಿನಸ್ ಟ್ಯೂರ ಮ್ಯಾಲಿದ್ದೆನಿ. ನೀವ ಬಂದು ನಿಮ್ಮ ಕಲ್ಲು ಒಳ್ಳು ತೊಗೊಂಡ ಹೋಗ್ರಿ, ನನ್ನ ಮಾರಿ ನೋಡಕೋತ ಎ ನಾ ಇನ್ನ ಮುಧೋಳದವ ಅಂತ ಯಾರ ಮುಂದೂ ಹೇಳುದಿಲ್ಲನೋಡ ಅಂತ ಅಂದರು. ಯಾಕ್ರೀ ಅಂದ್ರ ಅಲ್ಲ, ಕಲ್ಲು ಒಳ್ಳು ತೊಗೊಂಡ ಬಾ ಅಂತಾರ ಇವತ್ತ ನಾವ ಊರಿಂದ ಬಂದದ್ದ ನೆನಿಸಿಗೊಂಡರ ಹುಚ್ಚ ಹಿಡಿಯೋದೊಂದ ಬಾಕಿ ಉಳಿದಿತ್ತು. ಬಾಂಬೆ ಟು ಗೋವಾ ಅಂತ ಹ್ಯಾಗ ಸಿನೆಮಾ ತಗದಾರೂ ಅವರಂಗನ ಇವತ್ತಿಂದ ನಮ್ಮ ಪ್ರಯಾಣದ ಸುಖಾನುಭವ ತೊಗೊಂಡು ಮುಧೋಳ ಟು ಬೆಳಗಾವ ಅಂತ ಮೂರ ತಾಸಿನ ಸಿನೆಮಾ ಆಗ್ತದ ನೋಡ ಮಾರಾಳ. ನಾ ಇನ್ನ ಮುಧೋಳದವ ಅಂತ ಮರ್‍ಯೋ ಹೇಳಾಂಗಿಲ್ಲ.'' ಅವರ ಮಾತ ಕೇಳಿ ನನಗ ಭಾಳಂದ್ರ ಭಾಳ ನಗೀ ಬಂತು.

ಕಲ್ಲು ಒಳ್ಳು ತಗೊಂಡ ಬಾ ಅಂದ್ರ ಅದಕ್ಕೇನರ ಉಪಾಯ ಮಾಡಿದರಾತ ಬಿಡ್ರಿ. ಆದರ ನಾವು ಮುಧೋಳದವರು ಅಂತ ಹೆಮ್ಮೆಯಿಂದ ಹೇಳಕೋಬೇಕ ಬಿಡ್ರಿ. ಯಾಕಂದರ ನಮ್ಮೂರು ರನ್ನನ ಊರು. ಗದಾಯುದ್ಧವೆಂಬ ಹಳೆಗನ್ನಡ ಮಹಾಕಾವ್ಯವನ್ನು ಬರೆದಂಥ ಮಹಾನ್ ಕವಿ ರನ್ನನ ಊರೆ ಮುಧೋಳ. ಆ ಮಹಾಕಾವ್ಯದಲ್ಲಿ ಗದಾಯುದ್ಧವನ್ನು ವರ್ಣಿಸಿದ ಬಗೆ ಹ್ಯಾಂಗ ಅಂದರ ಓದುಗರ ಮೈಮ್ಯಾಲಿನ ಕೂದಲ ಸೆಟದ ನಿಲ್ಲತಾವ. ಭೀಮಸೇನನ ಗದೆಯ ಪ್ರಹಾರವನ್ನು ಎದುರಿಸಲಾಗದೇ ಭೂಮಿಯ ಮೇಲೆ ಬಿದ್ದ ದುರ್ಯೋಧನನ ಅವಸಾನವನ್ನು ಮುಳುಗುತ್ತಿರುವ ಕೆಂಪು ಬಣ್ಣದಿಂದ ಕೂಡಿದ ಸೂರ್ಯನಿಗೆ ಹೋಲಿಸಿ ನನ್ನ ಮಾತನ್ನು ಅರ್ಧಕ್ಕೆ ತಡೆದರು. ಸಾಹಿತಿ ಆಗಬ್ಯಾಡ ಮಾರಾಳ. ಇಷ್ಟೊತ್ತನಕ ಕಲ್ಲಿನ ಸಂಗತಿ ಗುದ್ದಾಡಿ ಸಾಕಾಗೇದ, ಹೊಟ್ಟಿಗೇನರ ಬಿಸಿ-ಬಿಸಿ ಕೊಡು. ನನಗೂ ಖರೆ ಅನಿಸಿ ಅಡಿಗಿ ಮನಿ ಕಡೆ ಹೊಂಟೆ. ಹೊಂಟಾಕಿನ್ನ ತಡದ ಏ, ನಾ ಇನ್ನೊಂದ ಶ್ಯಾಣ್ಯಾತನದ ಕೆಲಸ ಮಾಡತೇನ ನೋಡ ಅಂದರು. ನೀವ ಮಾಡೋ ಶ್ಯಾಣ್ಯಾತನ ಎನ್ರಿ ಅಂದರ ನನ್ನ ಹೆಂಡತಿನ ಕೇಳಿ ಹೇಳ್ತೀನಿ. ಇದು ಬೆಸ್ಟ ಉಪಾಯ ನೋಡ.

ಹ್ಞೂ ಸಾಕು ಸಾಕು ಹೀಂಗ ಇಲ್ಲೇ ಪಡಸಾಲ್ಯಾಗ ಮಾತಾಡಕೋತ ಕೂಡೋಣ ಏನ ಹೊಟ್ಟಿಗೆ ಸ್ವಲ್ಪ ಬಿಸಿ ಬಿಸಿ ಹಾಕ್ಕೊಳ್ಳೋಣೊ.

ನೀನು ಅಡಿಗೆ ಮನಿಗೆ ಹೋಗುವದಕ್ಕಿಂತ ಮೊದಲು ನಾನು ಹೇಳುವ ಒಂದು ಚುಟುಕನ್ನು ಕೇಳಿ ಹೋಗಬಹುದಲ್ಲ ನನ್ನ ಮುದ್ದಿನ ಮಡದಿ.

ಓಹೋ ಅದಕ್ಕೇನಂತೆ ಕೇಳುವೆನು ಹೇಳುವಂಥವರಾಗಿರಿ ನನ್ನ ರಾಜಾ ಎಂದು ನಾನೂ ನಾಟಕೀಯವಾಗಿ ಉತ್ತರ ಕೊಟ್ಟೆನು. ಇವರು ತಮ್ಮ ಚುಟುಕನ್ನು ಪ್ರಾರಂಭಿಸಿದರು.

ದೀಪಾವಳಿ ದಿನದಂದು । ಅತ್ತಿ ಮನೆಯಲ್ಲಿ
ಅಳಿಯನಿಗೆ ಆಗುವರು ಆರತಿ ।
ಗುಡಿಗಳಲ್ಲಿ ಜರುಗುವದು ಅಭಿಷೇಕ ಮಂಗಳಾರುತಿ ।
ಕಲ್ಲು ಒಳ್ಳಿನಿಂದ ಇಂದಾಯಿತು ನನ್ನ ತಲೆ ಬಿಸಿ ಬಿಸಿ ।
ನನ್ನವಳಿಂದ ನನ್ನ ಮುಖಕ್ಕಾಯಿತು ಮಹಾ ಮಂಗಳಾರತಿ ।

ಹ್ಞ.. ಹ್ಞ..ಹ್ಞ..ಹ್ಞ.. ಇಬ್ಬರೂ ಒಟ್ಟಿಗೆ ನಕ್ಕೆವು. ರಗಡ ಅನುಭವ ಆಗೇದ ಅಂದಂಗಾತು. ಹ್ಞೂ ಮನಷ್ಯಾ ಅನುಭವದಿಂದ ಮ್ಯಾಲ ಬರತಾನಂತ. ಎ. ಏ ನೀ ಯಾವದೋ ಸಾಹಿತಿ ಡೈಲಾಗ ಹೊಡಿಲಿಕತ್ತಿ. ಮತ್ತ ಸಾಹಿತ್ಯದ ಕಡೆ ಹೊಳ್ಳಬ್ಯಾಡ ಅಡಗಿಮನೀಕಡೆ ಹೊಳ್ಳು ಅಂದರು.

ಬ್ಯಾಡ ಬ್ಯಾಡ ಮಹಾರಾಯ್ರ ಉಪ್ಪಿಟ್ಟು ಮಾಡಲಿಕ್ಕೆ ನಾ ಹೊಂಟೆ. ನಾನೂ ಅಡಿಗೆ ಮನಿಗೆ ನಿನ್ನ ಹಿಂದೆ ಬಂದೆ ಅಂತ ಅನಕೋತ ನನ್ನ ಕಡೆ ಬರಲಿಕತ್ತಾಗ ಹಾದ್ಯಾಗಿನ ಕಲ್ಲ ಎಡವಿ ಬೀಳೋದನ್ನ ತಪ್ಪಿಸಿಗೊಳ್ಳಲಿಕ್ಕೆ ನನ್ನ ಹಿಡದ ಅಪ್ಪಗೊಂಡರು. ಹ್ಞೇ ಹೋಳಿಗೆ ಜಾರಿ ತುಪ್ಪದಾಗ ಬಿದ್ದಾಂಗಾತ ನೋಡ ಅಂತ ಅನಬೇಕ. ಇಬ್ಬರೂ ಆ ಕಲ್ಲು ಒಳ್ಳು ನೋಡಿ ನಕ್ಕೋತ ಅಡಗಿ ಮನಿ ಸೇರಿದೆವು.



# ಪಂಚ ಮಹಾಭೂತಗಳು

- ಭೃಗುಕುಲ ತಿಲಕ

ಅವತ್ತ ಮುಂಜಾನೆಯಿಂದ ಬಸವರಾಜನ ತಲ್ಯಾಗ ಯಾವದೋ ಮುಂಬರುವ ಅಮೂರ್ತ ಅಪಾಯದ ಸೂಚನೆಯೇನೋ ಎಂಬಂತೆ, ಒಂದೇ ಸಮನೆ ಬಿಟ್ಟೂ ಬಿಡದೇ "ಬೀಪ್...ಬೀಪ್... ಬೀಪ್... ಬೀಪ್" ಅನ್ನಲಿಕ್ಕೆ ಹತ್ತಿತ್ತು. ಕಡೀಕು ಅಪಘಾತ ಆಗಿಂದನs ಆ "ಬೀಪ್... ಬೀಪ್" ನಿಂತಿತು.

★★★

ಬಸವರಾಜನ ಹೆಂಡತಿ ದಾಕ್ಷಾಯಿಣೀ ತಮ್ಮ ಶಂಕರು ಬೆಳಗಾವಿಯೊಳಗ ಜೂನಿಯರ್ ಇಂಜಿನಿಯರ್ ಇದ್ದ ಹುಡುಗ, ಅವತ್ತ ಮುಂಜಾನೆ ಬೆಂಗಳೂರಿಗೆ ಬರಾವ ಇದ್ದ, ರಾಣಿ ಚೆನ್ನಮ್ಮ ಎಕ್ಸ್‌ಪ್ರೆಸಗೆ. ಬಸವರಾಜ ಮುಂಜಾನೆ ಕಾರ ತಕ್ಕೊಂಡು ಸ್ಟೇಷನ್‌ಕ್ಕ ಹೋಗಿದ್ದ. ರಾಣಿ ಚೆನ್ನಮ್ಮ 7-20ಕ್ಕೆ ಬರಬೇಕಾದದ್ದು ದಿನಾಲೂ 8-20ಕ್ಕೆ ತಪ್ಪದ ಕರೆಕ್ಟ ಆಗಿ ಬರೋದು ಅವತ್ತ 9-20ಕ್ಕೆ ಬಂದಿತ್ತು. ಶಂಕರೂನ್ನ ಮನ್ಯಾಗ ಬಿಟ್ಟು ಬಸವರಾಜ ಆಫೀಸಿಗೆ ಬಂದಿದ್ದ. ತಲ್ಯಾಗ ಇನ್ನೂ "ಬೀಪ್... ಬೀಪ್" ಹೊಡಕೊಳ್ಳಲಿಕ್ಕೆ ಹತ್ತಿತ್ತು. ಬಸವರಾಜಗ ಇನ್ನೇನು ಅದರ ರೂಢಾನೂ ಆಗಲಿಕ್ಕೆ ಹತ್ತಿತ್ತು. ಇದ್ದಕ್ಕಿದ್ದಂತೆ "ಬೀಪ್" ನಿಂತುಬಿಟ್ಟಿತು. ಬಸವರಾಜಗ ಘಾಬರಿ ಆತು. ಹೆಣ್ತಿ ಮಕ್ಕಳ ಬಗ್ಗೆ ಚಿಂತೆ ಸುರೂ ಆತು. ಏನೇನೋ ಅಸ್ಪಷ್ಟ ಆತಂಕಗಳು ಕಾಡಲಿಕ್ಕೆ ಹತ್ತಿದವು. ಅವ ಘಾಬರ್ಯಾಗಿ ಮನೀಗೆ ದಾಕ್ಷಾಯಣಿಗೆ ಫೋನು ಹಚ್ಚಿದ.

"ದಾಕ್ಷೀ ಯಲ್ಲಾ ಬರೋಬ್ಬರ ಅಯಿತಿಲ್ಲೊ? Everything O.K?" ಎಂದು ಕೇಳಿದ.
"yes. ಓಕೇ ಏನೋ ಅಯ್ತಿ.... ಆದರ ಶಂಕರೂ ಬ್ರೇಕ್‌ಫಾಸ್ಟ್ ತಗೊಂಡು ಹೊರಗ / ಹೋದವ ಇನ್ನೂ ಬಂದಿಲ್ಲ. ಬ್ಯಾಡ ಬ್ಯಾಡ ಅಂದರೂ ಕೇಳದs ಯಲ್ಲೆ ಎದುರಿನ ಪಾರ್ಕಿಗೆ ಹೋಗ್ಯಾನೋ ಅಂತ ಎಂಕ್ಸಾಯಿಟಿ ಆಗಾಕ ಹತ್ತೇತಿ" ಎಂದಳು.

ಶಂಕರೂ ಎದುರಿನ ಪಾರ್ಕಿಗೆ ಹೋಗ್ಯಾನ ಅಂತ ಕೇಳಿ ಇದ್ದಕ್ಕಿದ್ದಂತೆ ಬಸವರಾಜನಿಗೆ ಬಿ.ಪಿ. ಹೆಚ್ಚಾತು. ಅವ ದಾಕ್ಷಾಯಣಿಗೆ

"ಛೋ... ನಿನ್ನ... ನಿನ ತವರ ಮನಿ ಬುದ್ದಿಗಟ... ಅವನ್ನ ಹಿಡದ ಕುಂದರಸಾಕ ಬರಲಿಲ್ಲೇನು ನಿನಗ?... ನಾ ಈಗ ಹೊರಟ ಬರತೇನು... I am coming" ಎಂದವನೇ ಫೋನು ಕುಕ್ಕಿ ಕಾರಿನಲ್ಲಿ ಮನೆಗೆ ಹೊರಟ.

★★★

ಬಸವರಾಜ ಪುಣ್ಯಾ ಮಾಡಿದ್ದ. ಆಂವಗ ಬೆಂಗಳೂರಿನ ಜಯನಗರದಾಗ ಮನೀ ಸಿಕ್ಕಿತ್ತು. ಅಷ್ಟs ಅಲ್ಲದs ಮನೀ ಎದುರಿಗೆ ಒಂದು ಅತ್ಯಂತ ಸುಂದರವಾದ ಉದ್ಯಾನವನ ಇತ್ತು. ಹಾಂಗ ನೋಡಿದರ ಅದು ಮುನಿಸಿಪಲ್ ಕಾರ್ಪೊರೇಶನ್‌ದವರ ಪಾರ್ಕ್ಽಽ! ಖರೆ! ಆದರೂ ಕಾರ್ಪೊರೇಶನ್‌ದವರು ಯಾಕೋ ಅತ್ಯಂತ ಮುತವರ್ಜಿಯಿಂದ ಆ ಉದ್ಯಾನವನವನ್ನೂ ಅದರ ಸೌಂದರ್ಯವನ್ನೂ ಕಾಯ್ದುಕೊಂಡು ಬಂದಿದ್ದರು.

ಸುಮಾರು ಅರ್ಧ ಮುಕ್ಕಾಲು ಎಕರೆ ವ್ಯಾಪ್ತಿಯ ಚೌಕೋನಾಕೃತಿಯ ಉದ್ಯಾನ, ವ್ಯವಸ್ಥಿತವಾಗಿ ಬೆಳೆಸಿದ ತರಹೇವಾರೀ, ಉದ್ದ...ಎತ್ತರ...ಗಿಡ್ಡ...ಅಡ್ಡ ತರುಲತೆಗಳು. ಅಂಚಿಗೆ ಹಸಿರು, ಕೆಂಪು, ಹಳದೀ ಹೂಗಳ ಸಣ್ಣ ಸಣ್ಣ ಸಸ್ಯಸಾಲು. ಅರ್ಜೆಂಟಿನಾ ತಬೂಬಿಯಾ, ಜಾರ್‌ಕಾಂಡಾ ಆದಿಯಾಗಿ ಆಕಾಶಕ್ಕೇ ಬಣ್ಣ ಬಳಿಯುವ ಹಳದೀ, ಕೆಂಪು, ನೇರಳೆ ಬಣ್ಣದ ಹೂಬಿಡುವ ಎತ್ತರದ ಮರಗಳು. ಇವೆಲ್ಲವುಗಳಿಗೆ ಆಸರೆಯಾಗಿ ಕೆಳಗೆ ನಳನಳಿಸುವ ಹಸಿರು ಹುಲ್ಲುಹಾಸು. ಒಟ್ಟಿನಲ್ಲಿ ಪಾರ್ಕುನಗರಿ ಬೆಂಗಳೂರಿಗೇ ಆದರ್ಶ ಪ್ರಾಯವಾಗಿತ್ತು ಆ ಪಾರ್ಕು.

ಸುತ್ತೂ ಕಡೆ ವಾಯುವಿಹಾರಿಗರಿಗೆ ಅನುಕೂಲವಾಗುವಂತೆ ಎರಡು ಮೀಟರಿನಷ್ಟು ಅಗಲದ ಪಥಕ್ಕೆ ಸಿಮೆಂಟಿನ ಹೆಂಚು ಜೋಡಿಸಿದ ಪ್ರದಕ್ಷಿಣೆಯ ವಾಕ್‌ಪಥ. ಅಲ್ಲಲ್ಲಿ ವಿಶ್ರಮಿಸಿಕೊಳ್ಳಲು ಸಿಮೆಂಟಿನ ಬೆನ್‌ಸಹಿತ ಬೆನ್‌ರಹಿತ ಆಸನಗಳು. ಸಂಜೆ ನಾಲ್ಕು ಗಂಟೆ ಆದಿತೋ ಇಲ್ಲವೋ ವಾಕ್ ಪಥದ ಸುತ್ತ ಪ್ರದಕ್ಷಿಣೆ ಅಪ ಪ್ರದಕ್ಷಿಣೆಗೆ ಜನವೋ ಜನ.

ಕೆಲವರಂತೂ ಮುಂಜಾನೆ, ಮಧ್ಯಾಹ್ನ ಸಂಜೆ ತ್ರಿಕಾಲ ಪಾರ್ಕಿಗೆ ತಮ್ಮನ್ನು ಅರ್ಪಿಸಿಕೊಂಡು ಪಾರ್ಕಿನ ಬಗ್ಗೆ ಅತಿಯಾದ ವ್ಯಾಮೋಹವನ್ನೂ, ಒಂದಿಷ್ಟು ಮಾಲಕೀ ಹಕ್ಕನ್ನೂ ಬೆಳೆಯಿಸಿಕೊಂಡ ಪಾರ್ಕೋಪಜೀವಿಗಳು. ಸಂಜೆ ಒಂದಿಷ್ಟು ಕತ್ತಲೆಯೋ ಕವಿನೆರಳೋ ಇದ್ದಕಡೆ ಮರಗಳ ಮರೆಗೆ, ಕೆಳಗೆ ಹುಲ್ಲು ಹಾಸಿನ ಮೇಲೆ ಒಬ್ಬರನ್ನೊಬ್ಬರು ತಬ್ಬಿ ಕುಳಿತು ಒದ್ದಾಡುತ್ತಿರುವ ಹೊಸ ಹೊಸ ಜಕ್ಕವಕ್ಕಿಗಳು. ಅವರ ನಿಟ್ಟುಸಿರು ನೀಳುಸಿರು ಬಿಸಿಯುಸಿರುಗಳು; "ಊಂ... ಆಹ್.... ಓಹ್" ಗಳು: "ಔಚ್...ಥೂ...ಅದೆಲ್ಲ ಈಗಲೇ ಬೇಡ"ಗಳು; "ನೀನು ಹೀಗೆ ಅಂತ ತಿಳಿದಿರಲಿಲ್ಲ... ನಾನು ಸತ್ತೇ ಹೋಗ್ತೇನೆ" ಗಳು. ಇಲ್ಲಿ ಹೊಸ ಹೊಸ ಪ್ರೇಮಿಗಳ ಹಸೀ ಹಸೀ ಯೌವನದ ಬದುಕು ಕ್ಷಣ ಕ್ಷಣಕ್ಕೆ ಪಲ್ಲವಿಸುತ್ತಿರುತ್ತದೆ.

ಕವಿ ರವೀಂದ್ರರ "ಹೆದ್ದಾರಿ"ಗಿಂತ ಪಾರ್ಕಿನ ಈ ಪ್ರದಕ್ಷಿಣಾ ಪಥಗಳೂ ಹುಲ್ಲು ಹಾಸುಗಳೂ ಹೆಚ್ಚಿನ ಕತೆ ಹೇಳಿಯಾವು!

ಅಲ್ಲಿ ಪಾರ್ಕಿನ ಹೊರಗೆ ಬೇಲಿಯಾಚೆಗೆ ಮೂಲೆಗೆ ಏಳೆಂಟು ಹುಡುಗರು, ದೇವರು ಇವರನ್ನು ಸಿಗರೇಟು ಸೇದಲೆಂದೇ ಹುಟ್ಟಿಸಿದ್ದಾನೇನೋ, ಎನ್ನುವಷ್ಟು ಭಯಭಕ್ತಿಗಳಿಂದ ಸಿಗರೇಟು ಸೇದುತ್ತ ನಿಂತಿರುತ್ತಾರೆ. ಮತ್ತು ಹೀಗೆ ನಿಷ್ಠೆಯಿಂದ ಸಿಗರೇಟು ಸೇದುತ್ತಿರಬೇಕಾದಾಗಲೆಲ್ಲ ಅವರು ಇಂಗ್ಲೀಷಿನಲ್ಲೇ ಮಾತಾಡುತ್ತಿರುತ್ತಾರೆ. ಆ ದೇವಕಾರ್ಯಕ್ಕೆ ಈ ಪೂಽಽಽರ್ ಕನ್ನಡ ಭಾಷೆ ಹೊಂದುವದೇ ಇಲ್ಲವೇನೋ ಎಂಬಂತೆ! ಆಗೀಗ ಒಂದಿಬ್ಬರು ಬರ್ಮುಡಾ ತೊಟ್ಟ ಹುಡುಗಿಯರು ಕೂಡಾ ಈ ಹುಡುಗರ ಜತೆ ಇಂಗ್ಲೀಷು ಮಾತಾಡುತ್ತ ಸಿಗರೇಟು ಸೇದುತ್ತಿರುತ್ತಾರೆ. ಮತ್ತೂ ಹೀಗೆ ಸಿಗರೇಟು

ಎಳೆಯುತ್ತಿರಬೇಕಾದರೆ ಇವರು "ನಮ್ಮ ಕಾಲ್ ಸೆಂಟರ್ರೂ.... ನಮ್ಮ ರೊಕ್ಕ... ನಮ್ಮ ಸಿಗರೇಟೂ.. ಯಾವ ಬೋ..... ಮಗಂದೇನು" ಎಂಬ ಮುಖ ಭಾವ ಹೊತ್ತು; ತಲೆ ತುಂಬ ಕೂದಲಿದ್ದ ಕಾಲದ ರಜನೀಕಾಂತನಂತೆ ಸ್ಟೈಲಿಶ್ ಆಗಿ ಕೆಟ್ಟ ಕೆಟ್ಟ ಮುಖ ಮಾಡುತ್ತಿರುತ್ತಾರೆ.

ಆದರೆ ಈಗ ಪಾರ್ಕಿನ ಈ ಗುಣ ವಿಶೇಷಗಳಾವವೂ ಬಸವರಾಜನ ಆತಂಕಕ್ಕೆ ಕಾರಣಗಳಾಗಿರಲಿಲ್ಲ. ಅವನ ದುಗುಡಕ್ಕೆ ಕಾರಣವಾದದ್ದು ಪಾರ್ಕಿನಲ್ಲಿದ್ದ ಆ ಹುಣಿಸೇ ಮರದ ಕೆಳಗಿನ ಆ ಸೀನಿಯರ್ ಸಿಟಿಝೆನ್ಸ್ ಬೆಂಚು! ಸ್ವಲ್ಪ ಪ್ರಶಸ್ಥವಾದ ಆ ಬೆನ್‌ಸಹಿತ ಬೆಂಚು! ಅದರದೇ ಹೆದರಿಕೆ!

ಆ ಬೆಂಚಿನದೇ ಒಂದು ಕತೆ.

ಹಾಗೆ ನೋಡಿದರೆ ನಾಲ್ಕಾರು ತಿಂಗಳುಗಳ ಹಿಂದೆಯಷ್ಟೇ ಆ ಸೀನಿಯರ್ ಸಿಟಿಝೆನ್ ಬೆಂಚು ಕೂಡ ಸಮಗ್ರ ಪಾರ್ಕಿನ ಒಂದು ಸೌಹಾರ್ದಯುತ ಅವಿಭಾಜ್ಯ ಅಂಗವೇ ಆಗಿತ್ತು. ಆದರೆ ಈಗ ಕತೆಯೇ ಬೇರೆಯಾಗಿತ್ತು!!

ಕಳೆದ ಎಷ್ಟೋ ವರುಷಗಳಿಂದ ಒಂದೇ ಒಂದು ದಿನ ತಪ್ಪದಂತೆ ನಿಯಮಿತವಾಗಿ ಸಂಜೆ ನಾಲ್ಕರಿಂದ ಆರರವರೆಗೆ, ಚಳಿ ಮಳೆ ಗಾಳಿಗಳಿಗೆ ಬೆಚ್ಚದೇ ಬೆದರದೇ; ಸೈಕ್ಲೋನು ಡಿಪ್ರೆಶನ್ನುಗಳಿಗೆ ಕ್ಯಾರೇ ಅನ್ನದೇ ಆ ಬೆಂಚಿನ ಮೇಲೆ ಏಳೆಂಟು ಜನ ವಯೋವೃದ್ಧರು ಲೋಕಾಭಿರಾಮಿಗಳಾಗಿ ವಿರಾಜಮಾನರಾಗಿರುತ್ತಿದ್ದರು. ನಿಜಲಿಂಗಪ್ಪನವರ ಕಾಲದಿಂದ ಇವರುಗಳನ್ನು ಆ ಬೆಂಚಿನ ಮೇಲೆ ನೋಡುತ್ತಿದ್ದೇವೆ ಎಂದು ಇಂದಿನ ಕಾಲದ ಹಿರಿಯರು ಆಗಾಗ ನೆನೆಯುತ್ತಿದ್ದರು.

ಪಾರ್ಕಿನಲ್ಲಿ ಎಷ್ಟೇ ಗದ್ದಲವಿದ್ದರೂ, ಅಲ್ಲಲ್ಲಿ ಅಲ್ಲಲ್ಲಿನ ಬೆಂಚುಗಳನ್ನು ಆಕ್ರಮಿಸಿಕೊಳ್ಳಲು ವಾಯು ವಿಹಾರಿಗರು ಪರದಾಡುತ್ತಿದ್ದರೂ, ಈ ಬೆಂಚಿನ ಮೇಲೆ ಸರಿಯಾಗಿ ಸಂಜೆ ನಾಲ್ಕರಿಂದ ಆರರವರೆಗೆ ಈ ಹಿರಿಯರು ಹಕ್ಕು ಸ್ಥಾಪಿಸಿರುತ್ತಿದ್ದರು. ಈ ಮುಂಗಡ ಬುಕ್ಕಿಂಗ್‌ದ ಗುಟ್ಟೇನು, ನಿತ್ಯ ಇದು ಹೇಗೆ ಸಾಧ್ಯ? ಇದರ ಹಿಂದಿನ ರಹಸ್ಯವೇನಿದ್ದೀತು? ಎಂದು ಜನ ಆಶ್ಚರ್ಯ ಪಡುತ್ತ, "ಬಹುಶಃ ಇವರ ಪೈಕಿ ಒಬ್ಬರಿಲ್ಲೊಬ್ಬರು ರಾತ್ರಿಯೆಲ್ಲ ಆ ಬೆಂಚಿನ ಮೇಲೆಯೇ ಮಲಗುತ್ತಿರಬೇಕು..." ಎಂದು ಮಾತಾಡಿಕೊಳ್ಳುತ್ತಿದ್ದರು. ಆದರೆ ವಾಸ್ತವದಲ್ಲಿ ಹಾಗೇನೂ ಆಗಿರಲಿಲ್ಲ. ನಿಜಲಿಂಗಪ್ಪನವರಿಂದ ವೀರೇಂದ್ರ ಪಾಟೀಲರ ಕಾಲದವರೆಗೆ ಆಗೀಗ ಈ ಬೆಂಚು ಬೇರೆಯವರ ಪಾಲಾದದ್ದೂ, ಹಾಗಾದಾಗ ಈ ಹಿರಿಯರು ಒದ್ದಾಡಿಕೊಂಡದ್ದೂ ಮತ್ತೂ ಹಾಗೆ ಆಕ್ರಮಿಸಿಕೊಂಡವರ ಜತೆ ಮಾತಿಗೆ ಇಳಿದದ್ದೂ ಇಲ್ಲವೆಂತಲ್ಲ. ಆದರೆ ಆಮೇಲೆ ಬರ್ತಾ ಬರ್ತಾ ಕ್ರಮೇಣ ಇತರ ಪಾರ್ಕಿಗರೆಲ್ಲ ಮಾತಾಡಿಕೊಂಡಂತೆ ಆ ಬೆಂಚನ್ನು ಈ ಹಿರಿಯರಿಗೇ ಬಿಟ್ಟುಕೊಟ್ಟು ಅದಕ್ಕೆ "ಸೀನಿಯರ್ ಸಿಟಿಝೆನ್ಸ್ ಬೆಂಚ್" ಅಥವಾ "ಗುರುಪೀಠ" ಎಂದು ಕರೆಯತೊಡಗಿದರು.

ಈ ಗುರುಪೀಠದ ಗುರು ಹಿರಿಯರಲ್ಲಿ ಸಿಂಗ್ರೈಯ್ಯಂಗಾರ್ರು ಸೀನಿಯರ್ ಮೋಷ್ಟು. ಅವರು ಸ್ವಾತಂತ್ರ್ಯ ಬಂದ ಹತ್ತು ವರುಷಕ್ಕೇ ಚಿತ್ರದುರ್ಗದ ಡೆಪ್ಟಿ ಕಮಿಷನರ್ ಆಗಿ ರಿಟೈರ್ ಆದವರು. ಆಮೇಲೆ ಹಿರಿಯೂರಿನ ಅಮಲ್‌ದಾರರಾಗಿದ್ದ ಕರಿಗೌಡರು. ನಂತರ ಮೈಸೂರು ಬ್ಯಾಂಕಿನ ಜನರಲ್ ಮೇನೇಜರ್ ಆಗಿದ್ದವರು, ವಿ.ಕೆ.ಎಸ್.ಪಿ. ತಾಂಡವೇಶ್ವರನ್ ಅವರು.

ಆಮೇಲೆ ಮುಂಬೈ ಕರ್ನಾಟಕದ ಪಾಚ್ಚಾಪುರ ಪ್ರಹ್ಲಾದರಾಯರು, ಕೋಲಾರದ ಡಿಸ್ಟ್ರಿಕ್ಟ್ ಜಡ್ಜ್ ಆಗಿದ್ದವರು. ಸಬ್ ರಿಜಿಸ್ಟ್ರಾರು ಸಿದ್ದಪ್ಪ ಪಿಡಬ್ಲೂಡಿಯ ಪೀರಸಾಬರು. ಆಮೇಲೆ ಒಂಬಬ್ಬರು ಲೆಕ್ಕಕ್ಕಿಲ್ಲದ ಚಿಲ್ಲೀ ಪಿಲ್ಲೀ ನಾನ್ ಗೆಝೆಟೆಡ್‌ಗಳು.

"ಗುರುಪೀಠ"ವನ್ನಿ "ಓನಾಸನ" (ಓರಿಯ ನಾಗರಿಕರ ಆಸನ)ವೆನ್ನಿ ಈ ಓರಿಯರು ತಲೆ ಕೆಡಿಸಿಕೊಂಡವರಲ್ಲ. ಅವರು ದಿನಾಲೂ ತಮ್ಮ ಪಾಡಿಗೆ ತಾವು ಮಾತಾಡುತ್ತ ಆಡುತ್ತ ಸಲೀಸಾಗಿ ಮಹಾರಾಜರ ಕಾಲಕ್ಕೆ, ದಿವಾನರುಗಳಾದ ವಿಶ್ವೇಶ್ವರಯ್ಯ ಮಿರ್ಜಾ ಇಸ್ಮಾಯಿಲ್‌ರ ಕಾಲಕ್ಕೆ, ಪುಟ್ಟಣ್ಣ ಚೆಟ್ಟಿಯವರ ಕಾಲಕ್ಕೆ, ರಾಜಸೇವಾ ಪ್ರಸಕ್ತ ಪಾಮಡಿ ಪಾಂಡುರಂಗ ಶೆಟ್ಟಿಯವರ ಕಾಲಕ್ಕೆ ಜಾರಿ ಬಿಡುತ್ತಿದ್ದರು.

"ಕಾಲ ಕೆಟ್ಟುಹೋಯ್ತು... ಕೆಟ್ಟು ಹೋಯ್ತು... ಹೈನೆಸ್ ಕಾಲಕ್ಕೇ..."...."ಒಂದು ರೂಪಾಯಿಗೆ ಹದಿನೈದಿಪ್ಪತ್ತು ಸೇರು ರಾಗಿ... ಅದೇ ರೂಪಾಯಿಗೆ ಆರೇಳು ಸೇರು ಅಕ್ಕೀ... ಛೇ ಕಾಲ..."...."ಒಮ್ಮೆ ಜಮಾಬಂದಿ ಸರ್ಕೀಟಿಕೆ ಹೋಗಿ ಬಂದರೆ... ಇಪ್ಪತ್ತಿಪ್ಪತ್ತು ದಿನ ಕೈಗೆ ತುಪ್ಪದ ವಾಸನೆ ಹೋಗಿರತಿರಲಿಲ್ಲ...."...."ಛೇ... ಛೇ... ಅಂತಹ ತುಪ್ಪ ಈಗೆಲ್ಲಿ ಸಿಗಬೇಕು ಸ್ವಾಮಿ?.... ಮುಖ್ಯವಾಗಿ ಆಗಿನ ಕಾಲದ ಎಮ್ಮೆಗಳೇ ಈಗಿಲ್ಲಾಽಽಽ... ಆಹಾಹಾ... ಏನು ಎಮ್ಮೆಗಳು... ಎಮ್ಮೆ ಅನ್ನಬೇಕು ಹೊಳೆನರಸೀಪುರದ್ದೇ... ಅಹಹ.... ಏನು ಬಣ್ಣ?... ಏನು ಕೋಡು?... ಏನು ಬಾಲ?...."

"ಒಮ್ಮೆ ಕಳ್ಳಂಬೆಳ್ಳದಲ್ಲಿ ತಾಲ್ಲೋಕು ಗುಮಾಸ್ತ ಪುಟ್ಟೇಗೌಡ ಪೇಟ ಇಟ್ಟುಕೊಳ್ಳದೇ ಬರೀ ರುಮಾಲು ಸುತ್ತಿ ಆಫೀಸಿಗೆ ಬಂದಿದ್ದಕ್ಕೆ.... ಇನ್ಸಪೆಕ್ಷನ್‌ಗೆ ಬಂದಿದ್ದ ಅಮಲದಾರ ವೆಂಕಟ ವರದ ಅಯ್ಯಂಗಾರರು "ಏನಯ್ಯ?... ಕೆಲಸಕ್ಕೆ ಬರುವಾಗ ಸರಿಯಾಗಿ ತಲೆಯ ಮೇಲೆ ಪೇಟ ಇಟ್ಟುಕೊಳ್ಳಬೇಕೆಂಬ ಪರಿಜ್ಞಾನವಿರಬೇಡವೇ ನಿನಗೆ..." ಎಂದು ಬೈದು ಪುಟ್ಟೇಗೌಡನನ್ನು ನಾಲ್ಕು ದಿನ ಸಸ್‌ಪೆನ್‌ಶನ್‌ನಲ್ಲಿಟ್ಟುಬಿಡುವುದೇ? ಈಗಿನ ಆಫೀಸರುಗಳಿಗೆ ಇಂತಹ ಧೈರ್ಯವುಂಟೆ?".... "ಈಗೇನ್ರೀ.. ಒಂದಿಷ್ಟು ವಾತ ಪಿತ್ತಕ್ಕೆಲ್ಲ ಆಸ್ಪತ್ರೆಗೇ ಅಡ್ಮಿಟ್ ಆಗುತಾವೇ ದರಿದ್ರಗಳು... ನಮ್ಮ ಕಾಲಕ್ಕೆ ನಂಜನಗೂಡಿನ ಪಂಡಿತರ ಲೇಹ್ಯ ನೆಕ್ಕಿಬಿಟ್ಟರೆ ವಾತ... ಪಿತ್ತ ಬಿಡಿ... ಕ್ಯಾನ್ಸರು – ಕ್ಯಾನ್ಸರು... ಕೂಡ ಹೆದರಿ ಓಡುತ್ತಿತ್ತು"...."ಎಲ್ಲ ಹೋಯ್ತಪ್ಪ.. ಹೋಯ್ತು... ಈ ಬಾಂಬೆ ಕರ್ನಾಟಕದವರು ಗುಳೇ ಕಟ್ಟಿಕೊಂಡು ಬಂದರು ನೋಡಿ ಎಲ್ಲ ಹೋಯ್ತು!... ಮೇಲೆ ಇವರಿಗೆ ಸೀನಿಯಾರಿಟಿ ಕೊಡಬೇಕಂತೆ... ಮನೆ ಕೊಡಬೇಕಂತೆ.... ಕಾಲ... ಕಾಲ".... "ನೋಡಿದೆನಲ್ಲ ಕೋಲಾರದಾಗಿದ್ದಾಗ... ಒಂದು ಲಾ ಗೊತ್ತಿಲ್ಲ, ಪ್ರೊಸೀಜರು ಗೊತ್ತಿಲ್ಲ ಕೇಸಿನ ಫ್ಯಾಕ್ಟ್ ಸಹಿತ ನೋಡಿಕೊಂಡು ಬಂದಿರತಿದ್ದಿಲ್ಲ ಕೋರ್ಟಿಗೆ ಬರೋ ಮುಂದ... ಬರೇ ಕರೇ ಕೋಟ ಹಾಕತಾವ... ಪೇಟಾ ಇಟುಗೊಂಡು ಟೊಂಕ ಬಗ್ಗಿಸಿ ಬಗ್ಗಿಸಿ ಖಾವಂದರೇ... ಅನ್ನೋಣೇನು... ಮಹಾಸ್ವಾಮಿ... ಸನ್ನಿಧಿ ಛೇ...ಛೇ... ಛೆ... ಕೋರ್ಟ ಅಂದರ ಮಹಾರಾಜರ ದರ್ಬಾರ ಆಗಿತ್ತು... ಓದಿಲ್ಲ... ಬರೀ ಇಲ್ಲ"....

ಹೀಗೆಲ್ಲ "ಆ ಕಾಲ ಒಂದಿತ್ತು... ದಿವ್ಯ ತಾನಾಗಿತ್ತು" ಎಂದು ಹಾಡಿಕೊಳ್ಳುತ್ತ ಸಂಜೆ ಸರಿಯಾಗಿ ಆರುಗಂಟೆ ಆಗುತ್ತಲೂ ಒಬ್ಬೊಬ್ಬರಾಗಿ ಕಾಲು ಎತ್ತೆತ್ತಿ ಇಡುತ್ತ ಅಡ್ಡಡ್ಡ ಇಡುತ್ತ ಕೈಗೋಲೂರುತ್ತ ಮನೆಗೆ ನಡೆದುಬಿಡುತ್ತಿದ್ದರು.

ಒಮ್ಮೊಮ್ಮೆ "ಗುರುಪೀಠ" ಸ್ವಲ್ಪ ಮೂಡಲ್ಲಿರುತ್ತಿದ್ದರೆ ಅವರೆದುರು ಪ್ರದಕ್ಷಿಣೆಗೆ ತೊಡಗಿರುತ್ತಿದ್ದ ನಾರೀಮಣಿಗಳನ್ನೂ ಅವರ ಧೈರ್ಯಶಾಲೀ (bold) ಉಡಿಗೆ ತೊಡಿಗೆಗಳನ್ನು ನೋಡಿ, "ಛೇ... ಅನ್ಯಾಯ... ಕಾಲ... ಸೆರಗು... ಸೆರಗೂ... ಸೆರಗೇ ಇಲ್ಲಲ್ಲ, ಕರೀಗೌಡರೇ" ಎಂದು ಪೇಚಾಡಿಕೊಳ್ಳುವದೂ; "ಈಗೇನು ಬಿಡಿಸ್ವಾಮಿ... ಏನೋ ಒಂದಿಷ್ಟು ಬಟ್ಟೆ ಅಂತ ತೊಟ್ಟುಕ್ಕೊಂಡಿರುತ್ತಾರಲ್ಲ... ನಮ್ಮ ಪುಣ್ಯ" ಎನ್ನುವದೂ "ನೀವು ಏನೇ ಹೇಳಿ ನಮ್ಮ ಹೆಂಗಸರು ಲಕ್ಷಣವಾಗಿ ಧರ್ಮಾವರದ್ದೋ ಕಾಂಜೀವರದ್ದೋ ಸೀರೆ ಉಟ್ಟುಕ್ಕೊಂಡು, ಕುಂಕುಮ ಇಟ್ಟುಕ್ಕೊಂಡು ತಲೆಗೆ ಒಂದಿಷ್ಟು ಮಲ್ಲಿಗೆ ಮುಡಿದುಕೊಂಡಿದ್ದರೆ... ಆ ಘನತೆ ಗಾಂಭೀರ್ಯ..." ಎನ್ನುವದೂ ಅದಕ್ಕೆ ಉಳಿದವರು "ಅಲ್ಲವೇ ಮತ್ತೆ" ಎನ್ನುವದೂ; ಮತ್ತೂ ಹಾಗೇ ಹೇಳ್ತಾ ಹೇಳ್ತಾನೇ ನಿರ್ವಾಹವಿಲ್ಲದೇ ಆ ಸೆರಗಿಲ್ಲದ ಹುಡುಗಿಯರ ಕಡೆ ನೋಡಿ "ಛೇ... ಕಾಲ... ಕಾಲ" ಎನ್ನುತ್ತ ಪೇಚಾಡಿಕೊಳ್ಳುವದೂ ಸಾಮಾನ್ಯವಾಗಿರುತ್ತಿತ್ತು.

ಆಗೊಮ್ಮೆ ಈಗೊಮ್ಮೆ ಅಪ್ಪಿ ತಪ್ಪಿ ಅಲ್ಲೊಂದು ಇಲ್ಲೊಂದು ತುಂಬ ತುಂಬ ತುಂಬಿಕೊಂಡ ಧರ್ಮಾವರವೋ ಕಾಂಜೀವರವೋ, ಗಜಗಮನೆಯಾಗಿ ಇವರೆದುರು ನಡೆದು ಹೋಗುತ್ತಿದ್ದರೆ ಹಿರಿಯರೆಲ್ಲ ಸಾಮೂಹಿಕವಾಗಿ ಶ್ರೀಮದ್ಗಾಂಭೀರ್ಯದಿಂದ ಆ ಗಜಗಮನೆಯ ಕಡೆಗೆ ಕಳ್ಳನೋಟ ಬೀರುತ್ತ ವಿಲಿವಿಲಿ ಒದ್ದಾಡಿಕೊಳ್ಳುತ್ತಿದ್ದರು. ಆಗೆಲ್ಲ ಸಿಂಗ್ರೈಯ್ಯಂಗಾರ್ರು ಪ್ರಸನ್ನವದನರಾಗಿ "ವಾ... ವಾ... ಡಿಟೋ.. ಡಿಟ್ಟೋ... ರೂಬು ರೂಬು ಭಾನುಮತಿ" ಅನ್ನಬೇಕು. ಕೂಡಲೇ ಮುಂಬೈ ಕರ್ನಾಟಕದ ಪಾಚ್ಛಾಪುರ ಪ್ರಹ್ಲಾದರಾಯರು "ಛೇ ತಗೀರೀ... ಎಲ್ಲೀ ಭಾನುಮತಿನ್ನ ತರತೀರಿ, ಭಾನುಮತಿ ಅಪ್ಪನಷ್ಟು ಛಂದ ಇದ್ದಾಳ ಹೆಣಮಗಳೂಽಽ ಥೇಟ ಥೇಟ ಹೂಬೇ ಹೂಬ ಶಾಂತಾ ಆಪ್ಟೆ.. ಶಾಂತಾ ಆಪ್ಟೇನಽಽ..." ಅನ್ನಬೇಕು.

ಈ ರೀತಿಯಾಗಿ ಗುರುಪೀಠದ ಹಿರಿಯರು, ಪಾರ್ಕಿನ ಅಧಿದೇವತೆಗಳು ಸಂತೋಷದಿಂದ ಕಾಲ ಕಳೆಯುತ್ತಿರಬೇಕಾದರೆ, ಒಮ್ಮೆ ಯಾವುದೋ ಒಂದು ಸಣ್ಣ ಮಾತಿಗೆ ಅವರವರಲ್ಲಿ ಜಗಳಕ್ಕಿಟ್ಟುಕ್ಕೊಂಡು ಬಿಟ್ಟಿತು. ನಡೆದದ್ದಿಷ್ಟೇ!

ಒಮ್ಮೆ ಕರಿಗೌಡರು ಯಾವದೋ ಕಾರಣಕ್ಕೆ ಬಾರದೇ ಇದ್ದಾಗ ಅವರ ಅನುಪಸ್ಥಿತಿಯಲ್ಲಿ ಸಿಂಗ್ರೈಯ್ಯಂಗಾರು, "ಈ ಕರಿಗೌಡ ಪೆದ್ದ ಮೋಸ್ಟ ಇನೆಫಿಸಿಯಂಟು ಒಂದು ಡ್ರಾಫ್ಟ್ ಹಾಕಲಿಕ್ಕೆ ಮೆಮೋ ಇಸ್ಯೂ ಮಾಡಲಿಕ್ಕೆ ಬರಿತಿದ್ದಿಲ್ಲ... ಮೆರಿಟ್ಟೇ ಇರಲಿಲ್ಲ... ಕಮ್ಯೂನಲ್ ಜಿ.ಓ. ದಿಂದ ಮುಂದೆ ಬಂದವ.... ಆದರೆ ತಿನ್ನೋದರಲ್ಲಿ ಗಟ್ಟಿಗ... ತಿಂದೂ ತಿಂದೂ ದಿವಾಣರಿಗೇ ಎಟ್‌ಹೋಮ್ ಕೊಡೊವಷ್ಟು ದೊಡ್ಡ ಮಹಡೀ ಮನೆ ಕಟ್ಟಿಸಿಬಿಟ್ಟ..." ಎಂದು ಕಾರಿಕೊಂಡರು. ಅದು ಹೇಗೋ ಈ ಮಾತು ಕರಿಗೌಡರಿಗೆ ಮುಟ್ಟಿಬಿಟ್ಟಿತು. ಅವರದೇ ಜನ ಸಬ್ ರಿಜಿಸ್ಟ್ರರ್ ಸಿದ್ದೇಗೌಡ ಹೇಳಿರಬೇಕು ಎಂದು ಉಳಿದವರಿಗೆ ಗುಮಾನಿ. ಹೇಗೂ ಇರಲಿ ಎರಡು ದಿನ ಬಿಟ್ಟು ಬೆಂಚಿಗೆ ಬಂದ ಕರಿಗೌಡರು ಸಿಂಗ್ರೈಯ್ಯಂಗಾರ್ರನ್ನು ಕಂಡವರೇ "ಏನು ಸ್ವಾಮೀ... ಹಿರಿಯರು ಅಂತ ಮರ್ಯಾದೆ ಕೊಟ್ಟರೆ ತೆಗೆದರಲ್ಲ ನಿಮ್ಮ ಹಾರುವ ಬುದ್ಧಿ... ನೀವು ತುಂಬ ಎಫಿಸಿಯಂಟೋ? ಚಿತ್ರದುರ್ಗದಲ್ಲಿದ್ದಾಗ ಸರಕಾರೀ ಆಸ್ಪತ್ರೆ ಮಿಡ್‌ವೈಫು ಮಂದಾಕಿನಿಯ ಕೈಲಿ ಚಪ್ಪಲಿ ಏಟು ತಿಂದಿದ್ದು ಮರೆತುಬಿಟ್ಟ ಹಾಗಿದೆ?" ಎಂದು

ಮರುಕಾಳಿದರು. ಸಿಂಗ್ರೈಯ್ಯಂಗಾರ್ರು ಇಷ್ಟೊಂದು ಅಪಮಾನದ ಹೀಯಾಳಿಕೆಯ ಮಾತು ಕೇಳಿ ಏನು ಮಾಡಲೂ ತೋಚದೇ ಅಸಹ್ಯ ಕೋಪದಲ್ಲಿ ಕುದಿಯುತ್ತ ಎದ್ದು ಮನೆಗೆ ನಡೆದುಬಿಟ್ಟರು. ಏಳೆಂಟು ದಿನ ಬೆಂಚ್‌ಗೆ ಬರಲೇ ಇಲ್ಲ.

ಒಂಭತ್ತನೇ ದಿನ ಉಳಿದವರು ಕರಿಗೌಡರಿಗೇ, "ಏನೋ ಹಿರಿಯರು ಒಂದು ಮಾತು ಹೇಳಿದರೆ ನೀವು ಅವರ ಪ್ರೈವೇಟ್ ಲೈಫ್‌ಗೇ ಕೈ ಹಾಕುವದೇ?... ಎಲ್ಲರಿಗೂ ಅವರವರ ಪ್ರೈವೇಟ್ ಲೈಫ್ ಇದ್ದದ್ದೇ ಅಲ್ಲವೇ?... ಅದರಲ್ಲಿ ಗಂಡಸು, ಅಧಿಕಾರ ಇದ್ದವರು ಅಂದಮೇಲೆ ಮಿಡ್‌ವೈಫೂ ಅಡ್ಡವೈಫೂ ಎಲ್ಲ ಇದ್ದದ್ದೇ ಅಲ್ಲವೇ?... ಉಳಿದಂತೆ ಎಲ್ಲರೂ ಬಡಬೋರೆಗೌಡನ ಹಣವನ್ನು ದಾಮಾಷಾ ಪ್ರಕಾರ ಹಂಚಿಕೊಂಡು ತಿಂದವರೇ ಅಲ್ಲವೇ?...ಅದಕ್ಕೆ ಯಾವ ನನ ಮಗನ ಎಫಿಸಿಯನ್ಸಿ ಯಾಕಲೆ ಬೇಕು?.. ಎಂದುಕೊಂಡು ನೀವು ಮಾತು ಮರೆತುಬಿಡಬಹುದಿತ್ತಲ್ಲವೇ?" ಎಂದು ಛೀಮಾರಿ ಹಾಕಿ "ಏನಾಗಿದೆಯೋ ಏನೋ... ಇವತ್ತು ಅವರ ಮನೆಗೇ ಹೋಗಿ ನೋಡಿಕೊಂಡು ಬರೋಣ ಬನ್ನಿ" ಎಂದು ಎಲ್ಲರೂ ಸಿಂಗ್ರೈಯಂಗಾರ್ರ ಮನೆಗೆ ನಡೆದರು.

ಬೆಂಚು ಅಯ್ಯಂಗಾರ್ರ ಮನೆ ಕರೆಗಂಟೆಯೊತ್ತಿದಾಗ ಸಂಜೆಯಾಗಿತ್ತು. ಒಳಗಿನಿಂದ ಅಯ್ಯಂಗಾರ್ರ ಹಿರಿಯ ಮಗ ಒಂದು ಅತಿ ಶುಭ್ರ ಬಿಳಿ ಮುಂಡು (ಹೊಸದು) ಉಟ್ಟು ಅಷ್ಟೇ ಶುಭ್ರ ಬಿಳಿ ವಸ್ತ್ರ ಹೊದ್ದು ನುಣ್ಣಗೇ ಅದೇ ತಾನೇ ಬೋಳಿಸಿಕೊಂಡವ ಬಾಗಿಲು ತೆರೆದು ಇವರನ್ನು ಕಂಡು "...ಇವತ್ತು ಬೆಳಿಗ್ಗೆ ಹೋದರು" ಎನ್ನುತ್ತ ಬಿಕ್ಕಿದ.

ಸಿಂಗ್ರೈಯ್ಯಂಗಾರ್ರು ಎಂಟು ದಿವ್ಸಗಳಿಂದ ಏನೋ ಒಂದು ಮನೋವ್ಯಾಧಿ ಯಲ್ಲಿದ್ದವರಂತೆ ಬಡಬಡಿಸಿ ಮಧ್ಯೆ ಮಧ್ಯೆ "ಮಂದೂ... ಮಂದಾಕಿನೀ" ಎಂದು ಏನೇನೋ ಅಸಂಬದ್ಧವಾಗಿ ಕನವರಿಸುತ್ತ, ಅವತ್ತು ಬೆಳಿಗ್ಗೆ ಮಗನಿಗೆ "ಕರಿಗೌಡರಿಗೆ ನನ್ನನ್ನು ಕ್ಷಮಿಸಲು ಹೇಳಿಬಿಡು" ಎನ್ನುತ್ತ ಕೊನೆಯುಸಿರೆಳೆದಿದ್ದರಂತೆ.

ಇದನ್ನು ಕೇಳಿ ಕರಿಗೌಡರು ಎದೆ ಒಡೆದುಕೊಂಡುಬಿಟ್ಟರು! ಗೌಡರು ಕಸುಬು ಅಡ್ಡ ಕಸುಬು ಎನ್ನದೇ ಎಷ್ಟೇ ದುಡ್ಡು ಮಾಡಿದ್ದರೂ ಪರಮ ದೈವಭಕ್ತರು. ಅವರು "ಅಯ್ಯೋ... ಪಾಪ. ಸಿಂಗ್ರೈಯ್ಯಂಗಾರ್ರನ್ನು ತಾನೇ ಕೊಂದಂತಾಯಿತೇ?... ದೇವರಂತಹ ಮನುಷ್ಯ... ಏನೋ ಒಂದಿಷ್ಟು ಖಯ್ಯಾಲಿ.... ಆದರೆ ಮನುಷ್ಯ ಒಳ್ಳೆಯವ... ಅಯ್ಯೋ ಹಾರವಯ್ಯನ ಶಾಪ ತಟ್ಟದಿದ್ದೀತೇ?" ಎಂದು ಕಂಡ ಕಂಡ ದೇವರಿಗೆಲ್ಲ ಪೂಜೆ ಮಾಡಿಸುತ್ತ, ಹೋಮ ಹವನ ಮಾಡಿಸುತ್ತ, ಕೊನೆಗೆ ಅದಾಗಿ ನಾಲ್ಕು ದಿವಸಕ್ಕೆ ತಾವೂ ಹೋದರು.

ಸ್ನೇಹಿತರೆಲ್ಲ ಹೋಗಿ ಮೇಲುಕೋಟೆಯ ಬಳಿ ಕರಿಗೌಡರ ಹುಟ್ಟೂರು ಮಲತಿಮ್ಮನಹಳ್ಳಿಯಲ್ಲಿ ಅವರಿಗೆ ಮಣ್ಣುಕೊಟ್ಟು ಬಂದರು.

ಇತ್ತಲಾಗ ಮುಂಬಯಿ ಕರ್ನಾಟಕದ ಪಾಚ್ಛಾಪುರ ಪ್ರಹ್ಲಾದರಾಯರಿಗೆ ಖರೋಖರ ಫಜೀತಿಗೆ ಇಟ್ಟುಕೊಂಡ ಬಿಟ್ಟಿತರೀ. "ಡಿಪ್ಟಿ ಕಮೀಷನರ್ ಸಿಂಗ್ರೈಯಂಗಾರು ಏನವಾ ಹೇಳಿ ಕೇಳಿ ಡಿಸ್ಟ್ರಿಕ್ಟ್ ಹೆಡ್ಡು... ಅಮಲದಾರ ಕರಿಗೌಡರಿಗೆ ಸಹಿತ ರಿಟೈರ್ ಆಗಲಿಕ್ಕೆ ಹದಿನೈದು ಮಿನೀಟ ಇದ್ದಾಗ ಐ.ಎ.ಎಸ್. ರ್‍ಯಾಂಕ್ ಕೊಟ್ಟು ಡಿಪ್ಟಿನ್ನ ಮಾಡಿದ್ದರಂತ. ತಾವು ಸ್ವತಃ ಡಿಸ್ಟ್ರಿಕ್ಟ್

ಜಡ್ಜ್ ಇದ್ದವರು, ಏನು ಹಾಂಗs ಪುಕ್ಕಟ ಅಲ್ಲ! ಅಂತಹ ತಾವು ಈಗ ಬರೇ ಈ ನಾನ್ ಗೆಜೆಟೆಡ್ ಮಂದೀ ಸಂಗತೀ ಬೆಂಚಮ್ಯಾಲ ಕೂತರ ಹ್ಯಾಂಗ? ನೋಡಿದ ಮಂದಿ ಏನಂದಾರು? ಏನಪಾ ರಿಟೈರ ಆಗೇನಿ ಖರೇ. ಆದರೂ ಈ ಆರ್ಡಿನರಿ ಮಂದೀ ಸಂಗತೀ.. ಛೇ.. ನಾಳೆ ಹೈಕೋರ್ಟಿಗೆ ಗೊತ್ತಾದರ ಪೆನ್‌ಶನ್ ನಿಂದರಿಸಿದರೂ ನಿಂದರಿಸಿದರsss.... ಮೊದಲs ಭ್ರಾಂಭ್ರಿಗೆ ದಿವಸ ಇಲ್ಲ. ಹಂತಾದರಾಗ ಈ ಯಃಕಶ್ಚಿತ್ ಆರ್ಡಿನರಿ ನಾನ್ ಗೆಝೆಟೆಡ್ ಮಂದಿ...'' ಎನ್ನುತ್ತ ಚಡಪಡಿಸಿ ಚಡಪಡಿಸಿ ನಾಲ್ಕು ದಿವಸಕ್ಕೆ ಅವರೂ ಹೋದರು.

ಅವರ ಬಂಧುಗಳೂ ಮಕ್ಕಳೂ ಸೇರಿ ಬಾಗಿಲುಕೋಟೆಯ ಸೀತಿಮನಿ ಹತ್ತಿರ, ಕೃಷ್ಣಾ ನದಿಯೊಳಗ ಪುರೋಹಿತರಿಗೆ ಹೇಳಿಕೊಂಡು, ಸ್ವಲ್ಪ ದೂರ ಬ್ಯಾರೆ ಕಡೆ ಆರ್ಡಿನರಿ ಮಂದಿ ಇಲ್ಲದಲ್ಲೆ ಹೋಗಿ ಅವರ ಅಸ್ತಿ ವಿಸರ್ಜನೆ ಮಾಡಿ ಬಂದರು.

ಈ ರೀತಿ ಒಂದೆರಡು ತಿಂಗಳಲ್ಲಿ ಒಬ್ಬೊಬ್ಬರೇ ಒಬ್ಬೊಬ್ಬರೇ ಆಗಿ ಉಳಿದವರೆಲ್ಲ ಹೋಗಿ, ಕೊನೆಗೆ ಲೆಕ್ಕಕ್ಕಿಲ್ಲದ ಇಬ್ಬರು ಅಪಹಾತ ನಾನ್‌ಗೆಝೆಟೆಡ್ ನಕುಲ ಸಹದೇವರು ಮಾತ್ರ ಉಳಿದುಕೊಂಡರು.

ಮುಂದಿನ ಕೆಲವು ದಿನಗಳಲ್ಲಿ ಆ ವಿಶಾಲವಾದ ಸೀನಿಯರ್ ಸಿಟಿಝನ್ಸ್ ಬೆಂಚಿನ ಮೇಲೆ ಇವರಿಬ್ಬರೇ ಮುದುಕರು ಕೂತಿರುತ್ತಿದ್ದದನ್ನು ಪ್ರದಕ್ಷಿಣಾ ಪಥದ ವಾಕಿಗರು ಆಶೆಗಣ್ಣಿನಿಂದ ಅಷ್ಟೇ ಏಕೆ ದುರಾಶೆಗಣ್ಣಿಂದ ನೋಡುತ್ತ ಅಡ್ಡಾಡತೊಡಗಿದರು. ಕೆಲವು ಗಟ್ಟಿಗರು ''ಗುರುಪೀಠ''ಕ್ಕೆ ತೀರ ಹತ್ತಿರ ಬಂದು ಇನ್ನೇನು ಕೂತೇ ಬಿಡುವರೇನೋ ಎಂದು ಭಯ ಹುಟ್ಟಿಸುವರು. ಬೆಂಗಳೂರಿನ ಮಲ್ಲೇಶ್ವರಂನ ದೊಡ್ಡ ದೊಡ್ಡ ಬಂಗಲೆಗಳಲ್ಲಿ ವಾಸಿಸುತ್ತಿರುವ ಒಬ್ಬೊಬ್ಬರೇ ಮುದುಕಿಯರನ್ನು ಸಂಜೆ ಹೊತ್ತು ರಿಯಲ್ ಎಸ್ಟೇಟು ರೌಡಿಗಳು ಕೆಂಗಣ್ಣು ಬಿಟ್ಟು ಹೆದರಿಸುತ್ತಿರುತ್ತಾರಲ್ಲ ಹಾಗೇ.

ಕೊನೆಗೆ 'ಗುರುಪೀಠ'ದ ಗೌರವವನ್ನು ಹೇಗಾದರೂ ಕಾಯ್ದುಕೊಳ್ಳಲು ತಮ್ಮಿಂದ ಆದೀತೋ ಇಲ್ಲವೋ ಎಂದು ಕೊರಗಿ ಕೊರಗಿ ಒಂದು ದಿನ ನಕುಲ ಸಹದೇವರೂ ತೀರಿಹೋದರು.

ಹೀಗೆ ಖಾಲಿಯಾದ 'ಗುರುಪೀಠ'ವನ್ನು ನೋಡಿ ಇಡೀ ಪಾರ್ಕಿಗೆ ಪಾರ್ಕೇ ಗೊಳೋ ಎಂದು ಅತ್ತಿತು. ಪಾರ್ಕಿನ ರೆಗ್ಯುಲಿಗರೂ ಇತರರೂ ಸೇರಿ ಹಿರಿಯರ ಗೌರವಾರ್ಥ ಆ 'ಗುರುಪೀಠ' ಎಂದರೆ ಸೀನಿಯರ್ ಸಿಟಿಝನ್ ಬೆಂಚಿನ ಮೇಲೆ ಯಾರೂ ಕೂಡ್ರಬಾರದೆಂದೂ, ಆ ಬೆಂಚಿನ ಸುತ್ತ ಬಂಗಾರು ಬಣ್ಣದ ಸರಪಣಿ ಕಟ್ಟಿ ಬೆಂಚಿನ ಮೇಲೆ ಹಿರಿಯರೆಲ್ಲರ ಹೆಸರು ಕೆತ್ತಿಸಿ ಆ ಸ್ಮಾರಕಕ್ಕೆ ''ವಾನಪ್ರಸ್ಥ''ವೆಂದು ಹೆಸರಿಡಬೇಕೆಂದೂ ಮುನಿಸಿಪಲ್ ಕಾರ್ಪೊರೇಷನ್‌ದವರಿಗೆ ಮನವಿ ಸಲ್ಲಿಸಿದರು. ಕಾರ್ಪೊರೇಷನ್ನಿನ ಕೆಲವು ಉತ್ಸಾಹಿ ಇಂಜಿನಿಯರುಗಳೂ, ಕಂಟ್ರಾಕ್ಟರುಗಳು, ಕಾರ್ಪೊರೇಟರುಗಳೂ ಸೇರಿಕೊಂಡು 'ಬರೀ ಬೆಂಚಿನ ಮೇಲೆ ಹೆಸರು ಕೆತ್ತಿಸಿಬಿಟ್ಟರೆ ಅದೆಂತಹ ಸ್ಮಾರಕವಾದೀತು? ಅದಕ್ಕಿಂತ ಮದರಾಸಿನ ಮರೀನಾ ಬೀಚಿನಲ್ಲಿ ನಿಲ್ಲಿಸಿದಂತೆ ಬೆಂಚನ್ನು ಎತ್ತರಿಸಿ ಒಂದು ವಿಶಾಲ ಪೀಠವನ್ನಾಗಿ ಮಾಡಿ ಅದರ ಮೇಲೆ ಎಲ್ಲ ಹಿರಿಯರೂ ಕೂಡಿ ಕೈಕೋಲು ಹಿಡಿದುಕೊಂಡು

ಬರುತ್ತಿರುವಂತೆ ಕಲಾತ್ಮಕವಾದ ಒಂದು ಕರ್ೞ ಕಂಚಿನ ಲೈಫ್ ಸೈಜ ಪ್ರತಿಮೆಯನ್ನು ಸ್ಥಾಪಿಸಬೇಕೆಂದೂ ಅದಕ್ಕೆ ''ಸ್ನೇಹ ಸಂಧ್ಯಾ'' ಎಂದು ಹೆಸರಿಟ್ಟು ಪ್ರತಿಮೆಯ ಉದ್ಘಾಟನೆಗೆ ರಾಷ್ಟ್ರಪತಿಗಳನ್ನು ಕರೆಸಬೇಕೆಂದೂ ನಿರ್ಣಯಿಸಿ ಒಟ್ಟೂ ಪ್ರಾಜೆಕ್ಟಿಗೆ ಎಲ್ಲ ಸೇರಿ ಇಪ್ಪತ್ತೊಂದು ಕೋಟಿ ರೂಪಾಯಿ ಮಂಜೂರು ಮಾಡಿಸಿಕೊಂಡು, ತಾವೆಲ್ಲ ಎಲ್ಲೆಲ್ಲಿ ಸೈಟು ಮನೆ ಮಾಡಿಕೊಳ್ಳಬಹುದೆಂದು ಲೆಕ್ಕ ಹಾಕತೊಡಗಿದರು. ಫೈಲುಗಳು ಓಡಾಡತೊಡಗಿದವು.

ಇರುತ್ತ; ವೈಶಾಖ ಮಾಸದ ಒಂದು ಮಧ್ಯಾಹ್ನ, ಪಾರ್ಕಿನ ಮಾಲಿ ವೆಂಕಟಪ್ಪನ ಮಗ ಹರೆಯದ ಹುಡುಗ 'ಗುರುಪೀಠ'ದ ಬಳಿ ಹುಲ್ಲು ಕೀಳುತ್ತಿದ್ದವ ಬಿಸಿಲಿಗೆ ಬಳಲಿ 'ಗುರುಪೀಠ'ದ ಮೇಲೆ ಒಂದು ಕ್ಷಣ ವಿಶ್ರಮಿಸಲು ಕುಳಿತವನು ಹಾಗೇ ಕಣ್ಣು ತೂಗಿ ಬಂದು ಮಲಗಿ ನಿದ್ದೆಹೋದ. ದಣಿವಿಗೋ ಬಿಸಿಲಿಗೋ ಗಾಢ ನಿದ್ದೆಗೆ ಜಾರಿದ್ದ ಹುಡುಗ ಇದ್ದಕ್ಕಿದ್ದಂತೆ ಕಿರುಚಿಕೊಂಡು ಎದ್ದು ಯದ್ವಾತದ್ವಾ ಅರಚಿಕೊಳ್ಳತೊಡಗಿದ. ಹುಡುಗನ ಆಟಾಟೋಪಕ್ಕೆ ಹೆದರಿ ಮಾಲಿ ವೆಂಕಟಪ್ಪನೂ ಅವನ ಹೆಂಡತಿಯೂ, ಆ ಸಮಯಕ್ಕೆ ಪಾರ್ಕಿನಲ್ಲಿದ್ದ ನಾಲ್ಕಾರು ನಿರುದ್ಯೋಗಿಗಳೂ ಓಡೋಡಿ ಬಂದರು.

ಯಂಕಟಪ್ಪ ಗಾಬರಿಯಾಗಿ 'ಏನಾಯ್ತು ಮಗಾ' ಎನ್ನುತ್ತಲೂ ಹುಡುಗ ಕೋಪದಿಂದ ಫೂತ್ಕರಿಸುತ್ತ ''ಇಪ್ಪತ್ತೊಂದು ಕೋಟಿಯಲ್ಲಿ ನಮ್ಮ ಪಾಲೆಷ್ಟು?... ನಾನು ಡೆಪ್ಟಿ. ನನಗೇ ಚಳ್ಳೇಹಣ್ಣು ತಿನ್ನಿಸಲಿಕ್ಕೆ ನೋಡ್ತೀರಾ?'' ಎಂದು ಅಬ್ಬರಿಸಿ ಇನ್ನೊಂದು ದನಿಯಲ್ಲಿ ''ನ್ಯಾಯ ನೀತಿ ನೋಡಬೇಕರಪ್ಪಾ... ನಮ್ಮ ಜನ ಆಗಿ ನನಗೇ ಮೋಸ ಮಾಡ್ತೀರಾ?'' ಎಂದ. ಆಗ ಕೂಡಿದವರಲ್ಲೊಬ್ಬ ''ಐ... ಇದು ಮೊನ್ನೆಯವರೆಗೆ ಇಲ್ಲಿ ಕೂಡ್ರತಿದ್ದರಲ್ಲಾ ಆ ಕರಿಗೌಡರ ದನಿಯುಲ್ಲವೇ?'' ಎಂದು ಗುರುತಿಸಿದ. ಹುಡುಗ ಇದೇ ರೀತಿ ಎಷ್ಟೋ ಹೊತ್ತು ಕಿರುಚುತ್ತಿದ್ದವ ಆಮೇಲೆ ಸುಸ್ತಾಗಿ ಮಲಗಿಬಿಟ್ಟ. ಮುಂದೆ ತಿಂಗಳೊಪ್ಪತ್ತು ಭಯಂಕರವಾದ ವಿಷಮಶೀತ ಜ್ವರದಲ್ಲಿ ಬಳಲಿ ಬದುಕಿದ. ಆಮೇಲೆ ಕೂಡ ಎಷ್ಟೋ ದಿನ ''... ದಾಮಾಷಾ ಸರಿಯಾಗಿರಬೇಕು... ದಿವಾಣರವರೆಗೆ ದೂರು...'' ಎಂದು ಏನೇನೋ ಅಸಂಬದ್ಧವಾಗಿ ಬಡಬಡಿಸುತ್ತಲೇ ಇದ್ದನಂತೆ.

ಕೆಲ ದಿನಬಿಟ್ಟು ಇನ್ನೊಂದು ಸಂಜೆ ಒಬ್ಬ ಕಾಲೇಜು ಹುಡುಗ, ತನ್ನ ಸಂಗಾತಿಗಾಗಿ ಎಷ್ಟೋ ಹೊತ್ತು ಕಾಯ್ದು ಕಾಯ್ದು ಬೇಸತ್ತು, ''ಗುರುಪೀಠ''ದ ಮೇಲೆ ಸ್ವಲ್ಪ ಹೊತ್ತು ಕುಳಿತಿದ್ದವ ಇದ್ದಕ್ಕಿದ್ದಂತೆ ''ಭಾನುಮತೀಽಽಽ'' ಎಂದು ಕಿರುಚಿಕೊಳ್ಳುತ್ತ ಎಲ್ಲೋ ಓಡಿ ಹೋದವ ಹೋಗೇಬಿಟ್ಟನಂತೆ.

ದಿನಗಳೆದಂತೆ ಈ ಘಟನೆಗಳು ಹೀಗೇ ಬೆಳೆಯುತ್ತಲೇ ಹೋದವು. ಆ 'ಗುರುಪೀಠ'ದಲ್ಲಿ ಕುಳಿತವರೆಲ್ಲ ಒಂದಿಲ್ಲೊಂದು ಗಾಳಿ ಬಡಿದವರಂತೆ ಭ್ರಮಿಷ್ಟರಾಗಿ ಒದ್ದಾಡತೊಡಗಿದರು. ಒಮ್ಮೆ ಒಬ್ಬರು ಪಾಚ್ಛಾಪುರದ ದನಿಯಲ್ಲಿ ''ಒಬ್ಬೊಬ್ಬರಿಗೆ ಆರಾರು ತಿಂಗಳ ಒಳಗ ಹಾಕಸ್ತೇನಿ... ಜುಡಿಸಿಯರಿ ಅಂದ್ರ ಏನಂತ ತಿಳದೀರಿ... ದಡ್ಡ ಸೂ... ಮಕ್ಕಳ' ಎಂದು ಕಿರಿಚಿದರೆ ಇನ್ನೊಮ್ಮೆ ಮತ್ತೊಬ್ಬ ಸಬ್‌ರಿಜಿಸ್ಟ್ರರ ಸಿದ್ದಪ್ಪನ ದನಿಯಲ್ಲಿ ''ಎರಡು ಪರ್ಸೆಂಟು ಅಂತ ಎಲ್ಲರಿಗೂ ಗೊತ್ತೇ ಇದೆಯಲ್ಲ... ಹಾಗೇ ಅದಿಲ್ಲದೇ ರಿಜಿಸ್ಟ್ರಿ ಮಾಡಿಕೊಡು ಅಂದ್ರೆ ಹೇಗೆ?'' ಎಂದು

ಅರಚುವದೂ ಇನ್ನಾರೋ ಪೀರ ಸಾಬರ ದನಿಯಲ್ಲಿ "ನಮಾಜಕೆ ಟೇಮಕೋ ಹಮ್ ಪೈಸೇಕೋ ಹಾತ ನೈ ಲಗಾತ್ಯೆ.. ಬಾದಾಮೇ ಆನಾ" ಅನ್ನುವದೂ ನಡೆದೇ ಇತ್ತು. ಎಷ್ಟೋ ಸಲ ರಾತ್ರಿ ಮಾಲಿ ಯಂಕಟಪ್ಪನಿಗೂ ಅವನ ಹೆಂಡತಿಗೂ ಆ ಬೆಂಚಿನ ಹತ್ತಿರ "ಹುಜೂರ ಟ್ರೆಜರಿ.. ಆ್ಯಂಟಿಕರಪ್ಷನ್.... ದಾಮೂಷಾ... ಖಟ್ಲೆ.. ಸಾಕ್ಷಿ.. ಭಾನುಮತಿ ಅಪ್ಪೆ... ಖಾವಂದರು... ಕಮ್ಮರಪಟ್ಟಾ.. ಮಂದಾಕಿನೀ..." ಅಂತ ಯಾರಾರೋ ನಾಲ್ಕಾರು ಜನ ಮಾತನಾಡುತ್ತಿದ್ದಂತೆ ದನಿಗಳು ಕೇಳಿಸುತ್ತಿದ್ದವಂತೆ.

ಕೊನೆಗೆ ಜನ ಎಲ್ಲ ಸೇರಿ ಆ ಸೀನಿಯರ್ ಸಿಟಿಝನ್ ಬೆಂಚಿಗೆ ಭೂತಸಂಚಾರವಾಗಿದೆಯೆಂದೂ ಆ ಹಿರಿಯರ ಆತ್ಮಗಳೆಲ್ಲ ಬೆಂಚಿನಲ್ಲಿ ಸೇರಿಕೊಂಡಿವೆಯೆಂದೂ ಹೀಗೇ ಬಿಟ್ಟರೆ ತಪ್ಪಿದ್ದಲ್ಲವೆಂದೂ, ಕಾರ್ಪೋರೇಷನ್‌ದವರಿಗೆ "ಸ್ಮಾರಕವೂ ಬೇಡ ಏನೂ ಬೇಡ ಆ ಬೆಂಚನ್ನು ಕಿತ್ತೊಗೆದು ಅಲ್ಲೊಂದು ಬಿಲ್ವಪತ್ರೆ ಮರ ಹಾಕಿಸಿಬಿಡಿ, ಬಿಲ್ವ ಪತ್ರೆಯಲ್ಲಿ ಈಶ್ವರ ಇತರಾನಂತೆ. ಈ ಬೆಂಚ ಮಹಾಭೂತಗಳ ಕಾಟ ತಪ್ಪೀತು" ಎಂದು ಮನವಿ ಕೊಟ್ಟರು. ಇನ್ನೇನು ಕಾರ್ಪೋರೇಷನ್‌ದವರು ಬೆಂಚು ಕೀಳಬೇಕು ಎನ್ನುವಷ್ಟರಲ್ಲಿ...



ಬಸವರಾಜ ಗಾಬರಿಯಾದಂತೆಯೇ ಆಗಿತ್ತು. ಅವತ್ತು ಮುಂಜಾನೆ ರಾಣಿ ಚೆನ್ನಮ್ಮ ಎಕ್ಸ್‌ಪ್ರೆಸ್‌ಕ್ಕ ಬೆಳಗಾವಿಯಿಂದ ಬಂದ ಬಸವರಾಜನ ಹೆಂಡತಿ ತಮ್ಮ ಶಂಕರೂ, ಬ್ರೇಕ್‌ಫಾಸ್ಟ್ ಮುಗಿಸಿ ಅಕ್ಕನ ಕಣ್ಣು ತಪ್ಪಿಸಿ ಸಿಗರೇಟು ಸೇದಲೆಂದು ಮನೆಯ ಎದುರಿನ ಪಾರ್ಕಿಗೆ ಹೋಗಿ, 'ಗುರುಪೀಠ'ದ ಮ್ಯಾಲ ಕೂತು ಸಿಗರೇಟು ಹೊತ್ತಿಸಿದ್ದ.

ಎಷ್ಟೋ ದಿವಸಗಳಿಂದ ಪೀಠದ ಮ್ಯಾಲ ಯಾರೂ ಕೂತಿದ್ದಲ್ಲ. ಪೀಠ ಹಸಿದಿತ್ತು. ಕೇಳಬೇಕ? ತೊಗೋ... ಶಂಕರೂನಿಗೆ ಇದ್ದಕ್ಕಿದ್ದಂತೆ ದೀರ್ಘ ನಿದ್ದೆ ಆವರಿಸಿಕೊಂಡು ಬಂತು.

ಪುಣ್ಯಕ್ಕ ಬಸವರಾಜ ಬೇಗನೇ ಮನೆಗೆ ಬಂದ. ಅವನೂ ಅವನ ಹೆಂಡತಿ ದಾಕ್ಷಾಯಣಿಯೂ, ಅಷ್ಟೊತ್ತಿಗೆ ಮನೆಕೆಲಸಕ್ಕೆ ಬಂದಿದ್ದ ಕೆಲಸದ ಯುವತಿಯೂ ಮೂವರೂ ಓಡೋಡುತ್ತ ಪಾರ್ಕಿಗೆ ಬಂದು ಗುರುಪೀಠದಲ್ಲಿ ಮಲಗಿದ್ದ ಶಂಕರೂನನ್ನು ತಟ್ಟಿ, ಜಗ್ಗಿ, ಕುಲಕಿ, ಘಲ್ಲಿಸಿ, ಕೊನೆಗೆ ನೀರು ಚುಮುಕಿಸಿ, ಅದೂ ಸಾಲದೇ ಚೊಂಬು ನೀರು ಹೊಯ್ದು ಎಬ್ಬಿಸಿದರು. ಶಂಕರೂ ದೀರ್ಘ ನಿದ್ದೆಯಿಂದ ಎಚ್ಚೆತ್ತು ಕಣ್ಣು ಹೊಸೆದುಕೊಳ್ಳುತ್ತ ಇವರತ್ತ 'ಯಾರು ನೀವು' ಎಂಬಂತೆ ನೋಡಿದ.

ಬಸವರಾಜ "ಶಂಕರೂ ಏನೋ ಇದು?" ಮನೆಗೆ ಬಾರಪ್ಪ ಎಂದ.

ಅಷ್ಟೊತ್ತಿಗೆ ಪೂರ್ತಿ ಎಚ್ಚರವಾಗಿದ್ದ ಶಂಕರೂ ಮೂವರನ್ನೂ ನೋಡಿದ. ದಾಕ್ಷಾಯಿಣಿಯ ಬಳಿ ನಿಂತಿದದ ಕೆಲಸದವಳನ್ನು ನೋಡಿ ಜಿಗಿದೆದ್ದು "ಓ ಮಿಡ್‌ವೈಫು ಮಂದಾಕಿನೀ ಈಗಲಾದರೂ ನನ್ನ ಮೇಲೆ ದಯ ಬಂತೇ?" ಎಂದ.



# ಶಾಣ್ಯಾರು ಹುಟ್ಟೇ ಹುಟ್ತಾರ!

- ಎಚ್. ಶಾಂತರಾಜ ಐತಾಳ್

ಆಗಿನ ಕಾಲದಲ್ಲಿ ಬಕ್ರಾಪುರ ಊರಲ್ಲಿದ್ದದ್ದು ಒಂದೇ ಒಂದು ಕನ್ನಡ ಗಂಡು ಮಕ್ಕಳ ಶಾಲೆ. ಈ ಕ.ಗಂ.ಮ. ಶಾಲೆಯ ಬೋಪಣ್ಣ ಮಾಸ್ತರು ಕನ್ನಡ ಪಾಠ ಮಸ್ತಾಗಿ ಮಾಡುತ್ತಿದ್ದರು. ಮಧ್ಯೆ ಮಧ್ಯೆ ಅವರು ಹೇಳುತ್ತಿದ್ದ ಉಪಕತೆಗಳಂತೂ ಒಂಬತ್ತನೇ ಇಯತ್ತೆಯಲ್ಲಿ ಪರ್ಯಾಯ ಪೀಠವನ್ನಲಂಕರಿಸಿದ್ದ ನಮ್ಮ ಮಲ್ಲೇಶಿಯಂತವರಿಗೂ ಕ್ಲಿಷ್ಟವಾಗುತ್ತಿರಲಿಲ್ಲ; ಇಷ್ಟವಾಗುತ್ತಿತ್ತು. ಹಾಗೆ ನೋಡಿದರೆ ಮಲ್ಲೇಶಿಗೆ ಕ್ಲಾಸಿನಲ್ಲಿ ಅರ್ಥವಾಗುತ್ತಾ ಇದ್ದದ್ದು ಇಂತಹ ಕತೆಗಳು ಮತ್ತು ಅವರಿವರ ಕಂಠದಿಂದ ಹೊರಬರುತ್ತಿದ್ದ "ಹಿಸ್ ಮಾಸ್ಟರ್ಸ್ ವ್ಹಾಯ್ಸ್" ತಟ್ಟೆಗಳ ಹಿಂದೀ ಹಾಡುಗಳು ಮಾತ್ರ. ಬೇರೆಲ್ಲ ವಿಷಯಗಳು ಮಲ್ಲೇಶಿ ಮಟ್ಟಿಗೆ "ಗೋರ್ಕಲ್ಲ ಮೇಲೆ ನೀರೆರೆದಂತೆ' ವ್ಯರ್ಥವೇ ಆಗುತ್ತಿದ್ದವು.

ಅಂದೂ ಬಕ್ರಾಪುರದ ಕ.ಗಂ.ಮ. ಶಾಲೆಯಲ್ಲಿ ಬೋಪಣ್ಣನವರ ಬೈರಿಗೆ ಕೊರೀತಾ ಇತ್ತು ಬೃಹಸ್ಪತಿ ಮಲ್ಲೇಶಿ ಮತ್ತು ಗೆಳೆಯರ ತಲೆಯನ್ನು! ಯಾವುದೋ ವಿಷಯದ ಉಪಮೆಯಾಗಿ ಅವರು ಹೇಳುತ್ತಿದ್ದ ಕತೆಯ ಪರಿ ಹರಿಕತೆ ದಾಸರನ್ನು ನೆನಪಿಗೆ ತರುತ್ತಿತ್ತು.

"ಬಹಳ ಹಿಂದೆ ಬಂಗಾಳದಲ್ಲಿ ಗೋಪಾಲ ಭಾಂಡ್ ಎಂಬ ಯುವಕ ಇದ್ನಂತೆ - ನಮ್ಮ ತೆನಾಲಿ ರಾಮಕೃಷ್ಣನ ಹಾಂಗೇ - ಭಾರಿ ಬೆರಿಕಿ ಮನುಷ್ಯಾ! ಮಾತ್ನಲ್ಲೇ ಮಹಡಿ ಮನಿ ಕಟ್ಟಿ ಮಂದಿಗೆ ಮಜ್ಜಿಗೆ ಕುಡ್ಸೋದಕ್ಕೂ ಸೈ; ಮದ್ದಾನೆ ಮ್ಯಾಲ ಕೂರಿಸಿ ಮೆರವಣಿಗೆ ಮಾಡ್ಸೋದಕ್ಕೂ ಸೈ. ಒಂದ್ಸಲ ಇವಂಗೆ ಸಮುದ್ರ ತೀರದಾಗೆ ಭಾರಿ ಗಾತ್ರದ ಮೀನೊಂದು ಸಿಕ್ತಂತೆ. ಅದನ್ನ ತಲೀ ಮ್ಯಾಗ ಹೊತ್ಕೊಂಡು ಮನೀ ಕಡೆ ಹೊಂಟಿದ್ನಂತೆ. ಆಗಾಳೆ ಒಬ್ಬ ಸಾಹುಕಾರ ಸಿಕ್ಕಿ ಕೇಳಿದ್ನಂತ - 'ಅಲಲೆ ಭಾಂಡ್ಯಾ! ಏನಲೇ ಈಟುದ್ದ ಮೀನಾ ಎಲ್ಲಿ ಹೊಡದ್ಯಲೇ ಮಗನಾ?' ಅಂತ. ಅದಕ್ಕೆ ಭಾಂಡ ಹೇಳಿದ್ನಂತ "ಸಮುದ್ರದ ತೆರೀ ಮ್ಯಾಗ ಈಜ್ಕೊಂಡು ಬಂದು, ದಡದ ಮ್ಯಾಗ್ ಸುಸ್ತಾಗಿ ಬಿದ್ದಿತ್ರಿ - ನಾ ತಗೊಂಬಂದೆ" ಅಂತ.

"ನೀ ಇದನ್ನ ಹೀಂಗ ತಲೀ ಮ್ಯಾಗ ಹೊತ್ಕೊಂಡು ಹೊಂಟ್ರ ದಾರೀ ಮ್ಯಾಗ ಎಲ್ಲಾರೂ ಈ ಮೀನಾ ಎಲ್ಲಿಸ್ಕಿತ್ತು? ಏಸು ರೊಕ್ಕ ಕೊಟ್ಟಿ? ಅಂತ ಕೇಳ್ತಾವ್ರೆ ತಿಳ್ಕಾ" ಅಂದ್ನಂತೆ ಸಾವ್ಕಾರ.

"ಹಂಗೇನಿಲ್ಲಿ ಅಪ್ಪಾರ" ಎಂದು ಜವಾಬಿಸಿದ್ನಂತೆ ಗೋಪಾಲ ಭಾಂಡ. "ಆತಪ್ಪಾ ನಿನ್ನ ಮಾತಿಗೆ ಕಬೂಲ್ ಐತೆ. ನೀ ಇಲ್ಲಿಂದ ಮನೀ ಸೇರೊವರ್ಗೆ ಯಾವ್ನೋನೂ ಈ ಮೀನಿನ ಸುದ್ದಿ ನಿನ್ನೂಟೆ ಕೇಳಿಲ್ಲಾ ಅಂತಂದ್ರ ನಿನ್ಗ ನಾ ಹಿಂದಾಗಡಿ ನೂರು ರೂಪಾಯಿ ಕೊಡಾಂವ, ಏನಂತಿ?

"ಆತ್ ಬಿಡ್ರಿ. ಮೀನಾ ವಿಷ್ಯಾ ಯಾರೂ ಕೇಳ್ದಾಂಗ ನಾ ನೋಡ್ಕೋತೀನ್ರಿ. ಜಿದ್ದಿಗ್ ಬಿದ್ ಗೆದ್ರೆ ನನ್ಗ ನೂರ್‍ರುಪಾಯಿ ಇನಾಮು ಕೊಡ್ತೀರಿ. ಖರೇ ಹೌದಲ್ಲೋ."

"ಅಲೇ ನಿನಾಪ್ಷ ಕೊಡ್ತೀನಿ ಅಂದ್ ಮ್ಯಾಗ ತೀರ್ತು. ಇನ್ನೇನು? ಅದ ಹ್ಯಾಂಗ ತಗೊಂಡ್ಹೋಗ್ತಿ ನೋಡು. ಭಾಷೀ ಕೊಟ್ ಮ್ಯಾಗ ನಾ ತಪ್ಪೋಣಿಲ್ಲ ತಿಳ್ಕಾ" ಅಂದ್ನಂತೆ ಸಾವ್ಕಾರ.

ಗೋಪಾಲ ಭಂಡ್ಯಾ ಅಲ್ಲೇ ಹೋಳೀ ಬದಿಗೆ ಹೋದಂವ ಮೀನಾ ಕೆಳಗಿಟ್ಟ; ಮುಖ ಮೈಗೆಲ್ಲಾ ಅಲ್ಲಿ ಬಿದ್ದಿದ್ದ ಕೆಸರಾ ಚಲೋತ್ನಾಗ ಮೆತ್ಕೊಂಡು, ಮತ್ತ ಮೀನಾ ತಲೀ ಮೇಲಿಟ್ಟುಕೊಂಡು ಮನೀ ಕಡೀಗ್ ಹೊಂಟ.

ದಾರಿ ಮ್ಯಾಗ ಮಂದಿ ಹೋಗ್ತಾ ಇದ್ರು; ಬರ್‍ತಾನೂ ಇದ್ರು. ಎಲ್ಲಾರೂ ಭಾಂಡ್ಯಾನ ಈ ಅವತಾರ ನೋಡಿ ಕೇಳಾವ್ರೇ. ಯಾಕೋ ಭಾಂಡ್ಯಾ – ನಿನ್ನ ಮುಸುಡಿಗೆ ಏನಾಗ್ಯೆತೆ – ನಿನ್ ಮೈಗ್ ಏನಾಗ್ಯೆತೆ – ಕೆಸ್ರಾ ಹ್ಯಾಂಗ ಮೆತ್ಕೊಂಡದೆ ನೋಡು. ನಿನ್ನ ಮೂತಿಮ್ಯಾಗ – ಹೀಗ ತೆಲಿಗೊಂದು ಸವಾಲ್ – ಯಾವ್ರೋನೂ ಭಾಂಡ್ಯಾನ ತೆಲೀ ಮ್ಯಾಗಿದ್ದ ಮೀನಾ ವಿಷ್ಯಾ ಒಟ್ಟು ಕೇಳೇ ಇಲ್ಲಂತ, ನೋಡ್ರಿ. ಭಾಂಡ್ಯಾ ಮನೆ ಹೊಕ್ಕ. ಸಾವ್ಕಾರಂಗ ಏಲು ಬಡ್ದಂಗ ಆತು. "ಅದೇನು ಕರಾಮತ್ತು ಮಾಡಿ ಬಿಟ್ಯಲೇ ಭಾಂಡ್ಯಾ ಮಗನಾ. ತಗೊ ಈ ನೂರ್‍ರುಪಾಯಿ"! ಅಂತಂದು ಶಬ್ಬಾಸ್‌ಗಿರಿ, ನೂರ್‍ರುಪಾಯಿ ಎಲ್ಲೂ ಕೊಟ್ನಂತ ಈ ಶಾಣ್ಯಾರ ಸಾವ್ಕಾರ. ಹೆಂಗೈತಿ ಕತಿ? ಹುಡುಗುರೆಲ್ಲ "ಹೋ" ಅಂತ ಕಿರುಚಿ ಹುರುಪು ಕೊಟ್ರಂತೆ ಬೋಪಣ್ಣ ಮಾಸ್ತರಗೆ.

ಆ ಸಲದ ಅರ್ಧ ವಾರ್ಷಿಕ ಪರೀಕ್ಷೆಯ ಮಾರ್ಕ್ಸ್ ಕಾರ್ಡು ಕೈಲಿ ಹಿಡ್ಕೊಂಡ ಮಲ್ಲೇಶಿ ತಲೆಯನ್ನು ಗೋಪಾಲ ಭಾಂಡನ ಕತೆಯೇ ಕೊರೀತಿತ್ತು. ಮೂರು, ಹದಿನೈದು, ಎಂಟು, ಎರಡು, ಇಪ್ಪತ್ತಾರು – ಈ ಸಂಖ್ಯೆಗಳ ಮೆರವಣಿಗೆ ನೋಡಿ ರಿಪೋರ್ಟ್ ಮ್ಯಾಗ ಅಪ್ಪ ಸುಮ್ ಸುಮ್ನೇ ಸಹಿ ಹಾಕ್ಯಾರೇ? ಅಪ್ಪನಿಗೆ ಆಂಗ್ಲ ಸಾಹಿತ್ಯದ ಖಯಾಲಿ ಇದ್ದುದು ಮಲ್ಲೇಶಿಗೂ ಗೊತ್ತು. ಶಾಲಾ ಲೈಬ್ರರಿಗೆ ಬಂದ ಒಂದು ಹೊಚ್ಚ ಹೊಸ ಕಾದಂಬರಿಯನ್ನು ಲೈಬ್ರೇರಿಯನ್ನಿಗೆ ದಮ್ಮಯ್ಯ ಗುಡ್ಡೆ ಹಾಕಿ ಎರವಲು ಪಡೆದ. ಪುಸ್ತಕದ ಹಿಂದುಗಡೆ ರಿಪೋರ್ಟ್ ಕಾರ್ಡನ್ನು ಇರಿಸಿ ಪೆನ್ನು ಸಹಿತ ಅಪ್ಪನ ಬಳಿ ಹೋದ.

"ಯಾಕ್ಲೇ ಮಗನ, ಏನ್ ತಂದಿ ಮತ್ತ"! ಅಂತ ಅಪ್ಪಾ ಕೇಳಿದಾಗ ಮಲ್ಲೇಶಿ ಭಾರೀ ಉತ್ಸಾಹದಿಂದ್ಲೇ ಹೇಳಿದ "ಶಾಲೀ ಲಾಯಬ್ರರಿದಾಗ ಛಲೋ ಇಂಗ್ಲಿಷ್ ಪುಸ್ತಕ ಬಂದದ. ನಿನ್ಗ ಓದಾಕ್ ತಂದೀನೋ ಯಪ್ಪಾ" ಅಂತ. ಅಪ್ಪ ನೋಡ್ತಾರೆ; ಹೌದು ಹೊಸಾ ಪುಸ್ತಕ ಮೊನ್ನೆ ಮೊನ್ನೆ ಮಾರ್ಕೆಟಿಗೆ ಬಂದ ಕಾದಂಬರಿ. "ಅಲೆಲೆ ಇದ್ನ ಹ್ಯಂಗ್ ಹೊಡ್ಕೊಂಡು ಬಂದೀಲೆ? ಬೆರಿಕೀ ಅದೀ ನೋಡು" ಎಂದು ಮೆಚ್ಚುಗೆಯ ನುಡಿಯನ್ನಾಡಿದ ಅಪ್ಪ. ಇದೇ ಸುಸಮಯ ಅಂದ್ಕೊಳ್ತಾ ಮಲ್ಲೇಶಿ ಮೆತ್ತಗೆ ತನ್ನ ಮಾರ್ಕ್ಸ್ ಕಾರ್ಡ್, ಪೆನ್ನು ಎರಡನ್ನೂ ಅಪ್ಪನಿಗೆ ಹಸ್ತಾಂತರಿಸಿದ. ಹೊಸಾ ಪುಸ್ತಕದ ಪುಟಗಳನ್ನು ಮಗುಚಿ ಹಾಕುತ್ತಿದ್ದ ಅಪ್ಪನ ಕೈಯ ಹಸ್ತಾಕ್ಷರವನ್ನು ಸುಲಭವಾಗಿ ಗಳಿಸುವಲ್ಲಿ ಸಫಲನಾದ ಮಲ್ಲೇಶಿ.

ಅದೇನು ಯೋಗಾಯೋಗವೋ ಎಸ್.ಎಸ್.ಎಲ್.ಸಿ. ಯಲ್ಲಿ ಮೂರು ಭಾರಿ ಡುಮ್ಕಿ ಹೊಡೆದ ಮಲ್ಲೇಶಿಗೆ ಡಿಪ್ಲೋಮಾದಲ್ಲಿ ಸೀಟು ಸಿಕ್ಕಿತು. ಅಂತೂ ಇಂತೂ ಎರಡು ವರ್ಷ ಪೂರೈಸುವಲ್ಲೇ ಹೈರಾಣಾಗಿ ವಿದ್ಯಾಭ್ಯಾಸಕ್ಕೇ ಶರಣು ಹೊಡೆದ. ಮಲ್ಲೇಶಿ ಗುತ್ತಿಗೆ ಕೆಲಸ ಹಿಡಿಯಲಾರಂಭಿಸಿದ; ಮೋರಿಯಲ್ಲಿ ತುಂಬಿದ ಮಣ್ಣು ತೆಗೆಯೋ ಕೆಲಸ. ಡಾಮರ್ ಅಂಚಿಗೆ ಮಣ್ಣು ತುಂಬೋ ಕೆಲಸ; ಬೋಳು ಗುಡ್ಡೆ ಇರುವಲ್ಲಿಯೂ ಜಂಗಲ್ ಕ್ಲಿಯರೆನ್ಸ್ ಕೆಲಸ – ಎಲ್ಲಾ ಸಲೀಸಾಗಿ ಮಾಡಿದ. ''ಕೆಲಸ ಕೊಂಚ, ಹೆಚ್ಚು ಲಂಚ'' ಎಂಬ ಸೂತ್ರ ಸೃಷ್ಟಿಸಿದ; ಲಾಭ ಗಿಟ್ಟಿಸಿದ.

ಮಲ್ಲೇಶಿಗೆ ಮದುವೆ ಮಾರುಕಟ್ಟೆಯಲ್ಲಿ ಬೇಡಿಕೆಯೂ ಕುದುರಲಾರಂಭವಾಯಿತು. ಪಕ್ಕದೂರು ಸಂಕಟಳ್ಳಿ ಪಾಟೀಲರ ಮೂರನೆಯ ಸುಪುತ್ರಿ ಕರಿಯವ್ವ ಹೆಸರಿಗೆ ಹೊಂದಿಕೆಯಾಗುವಂತಿದ್ದಳು. ಅದಕ್ಕೂ ಮೇಲಾಗಿ ಆಕೆಯ ಮೆಳ್ಳೆಗಣ್ಣು, ಉಬ್ಬು ಹಲ್ಲು ಯಾವ ವರಮಹಾಶಯನನ್ನೂ ಆಕರ್ಷಿಸುವಲ್ಲಿ ಸಹಕಾರಿಯಾಗಿರಲಿಲ್ಲ. ಪಾಟೀಲರ ದೌಲತ್ತು. ಅವರ ಮನೆಯಲ್ಲಿರುವ ಸವಲತ್ತುಗಳ ಬಗ್ಗೆ ಕೇಳಿ ತಿಳಿದಿದ್ದ ಮಲ್ಲೇಶಿ ಕನ್ಯಾವೀಕ್ಷಣೆಗೂ ಸೈ ಅಂದ.

ಹುಡುಗಿ ನೋಡಲು ದಿನ ನಿಶ್ಚಯವೂ ಆಯಿತು. ಅಪ್ಪ ಮಗ ಇಬ್ಬರೇ ವಧು ಪರೀಕ್ಷೆ ಶಾಸ್ತ್ರ ಮಾಡುವುದೆಂದಾಯಿತು. ಸಂಕಟಳ್ಳಿ ಪಾಟೀಲರ ಮನೆಯಲ್ಲಿ ಅಬ್ಬರವೋ ಅಬ್ಬರ. ಮಲ್ಲೇಶಿಯ ಅಪ್ಪನಿಗೆ ಬೇಕಾದ ಬಗೆ ಬಗೆಯ ಲೇಖಕರ ಕೃತಿಗಳು ಒಂದೆಡೆಯಾದರೆ, ಮಲ್ಲೇಶಿಗೆ ಪ್ರಿಯವಾದ ಸಿನಿಮಾ ಹಾಡುಗಳ ವೈಭವ ಇನ್ನೊಂದೆಡೆ. ಅಪ್ಪ ಪರ್ಲ್ ಬಕ್, ಆರ್.ಕೆ. ನಾರಾಯಣರ ಪುಸ್ತಕಗಳಲ್ಲಿ ತಲ್ಲೀನ. ಮಗ 'ಬಹಾರೋ ಫೂಲ್ ಬರ್‌ಸಾವೊ' ಕಾಶ್ಮೀರ್ ಕೀ ಕಲೀ ಹುಂ ಮೇ ''ಲಾಲ್ ಛಡೀ ಮೈದಾನ್ ಖಡಿ'' ಸಿನಿಮಾ ಗೀತೆಗಳಲ್ಲೇ ವಿಲೀನ. ಬಗೆ ಬಗೆಯ ತಿಂಡಿಗಳ ಸೇವನೆಯ ಮಧ್ಯೆ ಲಗುಬಗೆಯಿಂದ ಕನ್ಯಾವೀಕ್ಷಣೆ ಜರಗಿತು. ಹೀಗಾಗಿ ಪಾಟೀಲರ ಮಗಳು ಚುಪ್ ಚಾಪ್ ಪಾಸ್ ಆದಳು.

ಮದುವೆಯ ಸಡಗರ ಮುಗಿದು ಮೊದಲ ರಾತ್ರಿಯಲ್ಲೇ ವಧುವಿನ ಸಮೀಪ ದರ್ಶನವಾದದ್ದು ಮಲ್ಲೇಶಿಗೆ. ಜ್ಞಾನೋದಯವಾದಾಗ ಸೂರ್ಯೋದಯ ಸಮೀಪಿಸಿತ್ತು. ಸಿನಿಮಾ ಹಾಡುಗಳಲ್ಲಿ ಮೈಮರೆತು. ವಧು ಪರೀಕ್ಷೆ ಮಾಡಿದ ದಿನವನ್ನು ನೆನಪಿಸಿಕೊಂಡ.

ಗೋಪಾಲ ಭಾಂಡ್‌ನ ಕತೆಯ ಯಶಸ್ವೀ ಪ್ರಯೋಗ ನಡೆಸಿದ ಕರಿಯವ್ವನ ಮನೆಯವರನ್ನು ನೆನಪಿಸಿಕೊಂಡು ''ಭಾಂಡ್ಯಾ ಮಗನ! ನಿನ್ನನ್ನ ಮೀರಿಸುವ ಶಾಣ್ಯಾರು ಹುಟ್ಯಾರಲೇ!'' ಎಂಬ ಮೆಸೇಜ್ ಕಳುಹಿಸಿದ ಮಲ್ಲೇಶಿ!



# ಹೆಂಡ್ತಿನ ಕರೆಯೋದು

- ಬೇಲೂರು ರಾಮಮೂರ್ತಿ

ಯಾರೋ ಒಬ್ರು ಇನ್ಯಾರೋ ಒಬ್ರನ್ನ ಮತ್ಯಾರ್ದೋ ಎದುರಿಗೆ ನೀವು ನಿಮ್ಮ ಹೆಂಡ್ತಿನ ಏನಂತ ಕರೀತೀರಾ ಅಂತ್ ಕೇಳಿದ್ದಕ್ಕೆ ಅವರು ಏನಂತ ಕರೆದರೂ ಅವಳು ಬರೋದಿಲ್ಲ, ಮೊದಮೊದಲು ಕರೆದರೆ ಜಿಂಕೆ ತರಹ ಬರ್ತಿದ್ದೋಳು ಈಗ ಹತ್ತಿಪ್ಪತ್ತು ಸಾರಿ ಕರೆದ ಮೇಲೆ ಹುಲಿ ತರಹ ಬರ್ತಾಳೆ ಅಂದ್ರಂತೆ. ಅಂದ್ರೆ ಗೊತ್ತಾಯ್ತಲ್ಲ ಅವರಿಗೆ ಮದುವೆಯಾಗಿ ಬಹಳ ವರ್ಷಗಳೇ ನಡೆದಿದೆ ಅಂತ. ಇರ್‍ಲಿ.... ಗಂಡ ಹೆಂಡ್ತಿನ ಕರೆಯೋದು, ಹೆಂಡ್ತಿ ಗಂಡನ್ನ ಕರೆಯೋದು (ಇದು ಸಂಸಾರದ ಒಂದು ರೀತಿನೀತಿ ಅಲ್ವೆ) ದಿನನಿತ್ಯದ ಸಂಗತಿ ಈಗೀಗ ಹೆಂಡ್ತಿ ಗಂಡನ್ನ ಕರೆಯೋದಕ್ಕೂ, ಮನೇಲಿರೋ ನಾಯಿನ ಕರೆಯೋದಕ್ಕೂ ಹೆಚ್ಚು ವ್ಯತ್ಯಾಸ ಇಲ್ಲ ಅಂತ ಅನೇಕ ಗಂಡಂದಿರ ಗೊಣಗಾಟದ ನಡುವೆಯೂ ಈ 'ಕರೆ' ಗಾರಿಕೆ ಇದ್ದೇ ಇದೆ. ಮಕ್ಕಳು ಹುಟ್ಟಿದಾಗ ಹೆಸರಿಡೋದೇ ಅವರನ್ನು ಕರೆಯೋದಿಕ್ಕಲ್ವೆ. ಆದರೆ ಈ ಹೆಸರು ಹೆಸರಾಗಿ ಉಳಿಯದೇ ಅನೇಕ ತುಂಡುಗಳಾಗಿ ಕೊನೆಗೆ ಅದು ಹೆಸರೇ ಅಲ್ಲ ಅನಿಸಿಕೊಂಡು ಬಿಡುತ್ತೆ.

ಈಗಲೂ ಕೆಲವು ಮನೆಗಳಲ್ಲಿ ಹೆಂಗಸರು ಗಂಡನನ್ನು ಏನೂಂದ್ರೆ, ಏನ್ರೀ, ಕೇಳಿಸ್ತ, ಇಲ್ಲಿ ಬನ್ನಿ, ಅಂತ ಕರೆಯೋದು ಹೇಗಿದೆಯೋ ಹಾಗೆ ಏಯ್ ಸತೀಶ, ಗೋಪೀ, ದಿನೀ (ದಿನೇಶ ಅನ್ನೋದಿಕ್ಕೆ), ರಾಜು ಅಂತ ಹೆಂಡತಿಯರು ಹೆಸರು ಹಿಡಿದು ಕರೆಯೋದೂ ಇದೆ. ನೋಡಿ ಗಂಡ ಹೆಂಡಿರ ನಡುವೆ ಪ್ರೀತಿ, ಬದ್ಧತೆ, ವಿಶ್ವಾಸ, ಸ್ನೇಹ, ಮಮತೆ ಇವೆಲ್ಲ ಇದ್ದರೆ ಅವರವರು ಹೇಗಾದರೂ ಕರೆದುಕೊಳ್ಳಲಿ ಅಲ್ವೆ. ಗಂಡನಿಗೆ ಅವಳು ಹೆಂಡತಿಯಾದರೂ, ಹೆಂಡತಿಗೆ ಅವಳು ಗಂಡನಾದರೂ ಇಬ್ಬರಿಗೂ ಅವರವರದೇ ಆದ ಅದೆಂಥದೋ ಫೀಲಿಂಗ್ಸ್ ಇರುತ್ತಲ್ಲ ಅದು ಹರ್ಟ್ ಆಗದ ಹಾಗೆ ನಡ್ಕೊಂಡ್ರೆ ಸಾಕು ಅಲ್ವೆ. ಈ ಮುದ್ದಿನ ಹೆಸರುಗಳು ಏಕಾಂತಕ್ಕೆ ಸೀಮಿತವಾಗಿದ್ದರೆ ಇನ್ನು... ಆಕೆ ಗಂಡನನ್ನು ಏಕವಚನದಿಂದ ಕರೀತಾಳೋ ಬಹುವಚನದಿಂದ ಕರೀತಾಳೋ ಅನ್ನೋದು ಬೇರೆಯವರಿಗೆ ಗೊತ್ತಾಗಬೇಕಿಲ್ಲ ಅಲ್ವೆ?

ಗಂಡ ಹೆಂಡಿರ ನಡುವೆ ಪ್ರೀತಿ ಹೆಚ್ಚಾದಾಗ ಮಾತು ಕಡಿಮೆ ಆಗುತ್ತಂತೆ. ಹೀಗೆ ಮಾತು ಕಡಿಮೆಯಾದಾಗಲೇ ಅನ್ನಪೂರ್ಣ ಅನ್ನಿ ಆಗ್ತಾಳೆ, ಸರೋಜ ಸರೂ ಆಗ್ತಾಳೆ, ಸುವಾಸಿನಿ ಸುವ್ವಿ ಆಗ್ತಾಳೆ. ಹಾಗೆ ಸತೀಶ ಸತ್ತೀ ಆಗ್ತಾನೆ, ಪ್ರಭಾಕರ ಪ್ರಭಿ ಆಗ್ತಾನೆ, ಸುಬ್ರಮಣ್ಯ ಸುಬ್ಬಿ ಆಗ್ತಾನೆ ಇದರಲ್ಲೇನು ತಪ್ಪಿಲ್ಲ ಬಿಡಿ. ಹೀಗೆ ಕರೆಯುವ ಪ್ರೀತಿಯ ಹೆಸರಿಂದ ಅನೇಕ ಹಾಸ್ಯ

ಪ್ರಸಂಗಗಳು ಹುಟ್ಟಿಕೊಳ್ಳುತ್ತೆ. ಒಬ್ಬಾಕೆ ಪಕ್ಕದ ಮನೆಯವರ ಹತ್ತಿರ ಮಾತಾಡ್ತಾ 'ಅಯ್ಯೋ ಬರ್ತೀನ್ರಿ ನಮ್ಮ ಪಾಪುಗೆ ಊಟಕ್ಕೆ ಹಾಕಬೇಕು ಅಂದ್ಲಂತೆ.' ಪಕ್ಕದ ಮನೆಯವರಿಗೆ ಆಶ್ಚರ್ಯ. ಅವರು ಹೊಸದಾಗಿ ಪಕ್ಕದ ಮನೆಗೆ ವಾಸಕ್ಕೆ ಬಂದಿರೋರು, ಇರೋದು ಗಂಡ ಹೆಂಡ್ತಿ ಇಬ್ಬರೇ. ಹೀಗಿರುವಾಗ ದಿಢೀರ್ ಅಂತ ಈ ಪಾಪು ಎಲ್ಲಿಂದ ಬಂತು ಅಂತ. ಅವಳು ಹೇಳಿದಳಂತೆ ನಾನು ನಮ್ಮ ಯಜಮಾನರನ್ನು ಪ್ರೀತಿಗೆ ಪಾಪು ಅಂತ ಕರೆಯೋದು ಅಂತ. ಪುಣ್ಯ ಪಾಪು ಅಂತಿದಾಳೆ ಪಾಪಿ ಅಂತಿಲ್ಲ. ಯಾರಿಗೆ ಗೊತ್ತು ಸಿಟ್ಟು ಬಂದಾಗ ಪಾಪಿ ಅಂತನೇ ಕರೀಬಹುದು.

ಎಲ್ಲಾ ಹೆಣ್ಣು ಮಕ್ಕಳಿಗೂ ಕುತೂಹಲ ಇರುತ್ತೆ ಅವಳ ಯಜಮಾನರು ಅವಳನ್ನು ಏನೂಂತ ಕರೀತಾರೆ ಅಂತ. ಹಾಗೇ ನನ್ನ ಮದುವೆಯಾದ ಮೇಲೆ ನನ್ನವರು ನನ್ನನ್ನು ಏನೆಂದು ಕರೀಬಹುದು ಅನ್ನೋ ಕುತೂಹಲವೂ ಇತ್ತು. ಇದೆಲ್ಲ ಕೇವಲ ಕೆಲವೇ ವರ್ಷ ಇರುತ್ತೇನೋ. ಬರ್ತಾ ಬರ್ತಾ ರಾಯನ ಕುದುರೆ ಕತ್ತೆ ಆಯಿತು ಅನ್ನೋ ಹಾಗೆ ಲೇ ಎಲ್ಲಿದ್ದೀಯೇ... ಇವಳೊಬ್ಬಳು ಕಿವುಡಿ.... ಲೇ ಕತ್ತೆ... ಕೇಳ್ತೇನೇ. ಅಂತೆಲ್ಲ ಕೂಗೋದು ಇದ್ದೇ ಇರುತ್ತೆ. ಇದೇನು ಪ್ರೀತಿ ಮಾಸಿದ ಬದುಕಿನ ಪರಿಣಾಮವೋ ಏನೋ ಗೊತ್ತಿಲ್ಲ.

ಇಂದಿಗೂ ಪತಿ ಪತ್ನಿಯರ ಪ್ರೀತಿ ಪೂರ್ವಕ ಮಾತುಗಳ ಬಗೆಗೆ ಯೋಚಿಸಿದಾಗ ನನಗೆ ನೆನಪಿಗೆ ಬರೋದು ಕವಿ ಮುದ್ದಣ. ಅವನಷ್ಟು ಪ್ರೀತಿಯಿಂದ ಸಂಬೋಧಿಸಿದವರು ಇನ್ಯಾರೂ ಇರಲಾರರು ಅನಿಸುತ್ತದೆ. ಶ್ರೀ ರಾಮಾಶ್ವಮೇಧ ಕಾವ್ಯದಲ್ಲಿ ಅವನು ಉದ್ದಕ್ಕೂ ತನ್ನ ಮುದ್ದಿನ ಮಡದಿ ಮನೋರಮೆಯನ್ನು ವಿವಿಧ ಹೆಸರುಗಳಿಂದ ಸಂಬೋಧಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಗಮನಿಸಿದರೆ ಮೈ ಜುಂ ಅನಿಸುತ್ತದೆ.

ಪ್ರಾಣೇಶ್ವರೀ, ರಮಣೀ, ಬಾಲೆ, ಗಡಸುಗಾರ್ತಿ, ಮನೋರಮೆ, ಎನ್ನರಸಿ, ಪೆಣ್ಣೆ, ಕಾಂತೆ, ಸುಂದರಿ, ಬಾಲೇಂದು ಫಾಲೆ, ಚನ್ನರಸಿ, ಹೊನ್ನರಸಿ, ಮೋಹನಾಂಗಿ, ಎನ್ನ ಕೊಂಡಾಟದ ಬಾಳ್ವಣಮೆ, ಎನ್ನ ಕೈಗೆಳಸಮೆ, ನಿಚ್ಚನಿಡುಗುಂಕುಮದ ಬಿಂಕದ ಮೆಚ್ಚುಗಾರ್ತಿ, ಇಚ್ಚೆಗಾರನ, ಬೆಚ್ಚ ಪಚ್ಚೆಯ ಕೈಗನ್ನಡಿ, ಮೆಚ್ಚುಗಾರ್ತಿ, ನಸೆಗಾರ್ತಿ, ದೇವಿ, ರತಿದೇವಿ, ಕುಲದೇವತೆ, ಸಕಲಗುಣ ಸಂಪನ್ನೆ, ಜೀವಿತೇಶ್ವರಿ, ಎನ್ನತ್ತೆಯ ಮಗಳೆ, ನೀಲಕುಂತಳೆ, ಕಣ್ಮಣಿಯೆ, ಶೋಭನಾಂಗಿ, ಹೀಗೆ ಅನೇಕಾನೇಕ ಹೆಸರುಗಳು ಇಡೀ ಕಾವ್ಯದಲ್ಲಿ ಪುಂಖಾನುಪುಂಖವಾಗಿ ಬರುತ್ತೆ. ಎಣಿಸಿದರೆ 108 ಆಗಬಹುದೋ ಏನೋ ಇದನ್ನೇ ಪತ್ನೀ ಅಷ್ಟೋತ್ತರ ಅಂತ ಕರೆದು ಪತಿರಾಯರು ಉಪಯೋಗಿಸಬಹುದು. ಆದರೆ ಈಗಿನ ಪತಿರಾಯರುಗಳು ಹೆಂಡ್ತಿಗೆ ಮಾಡುವ ಅಷ್ಟೋತ್ತರಗಳೇ ಬೇರೆ ಅಲ್ಲವೇ.

ಹೀಗೆ ಹೆಂಡತಿಯನ್ನು ಮಾತ್ರ ಶೃಂಗಾರ ಪ್ರಧಾನವಾದ ಅನೇಕ ರಸಗಳಿಂದ ಕರೆದವನು ತಾನು ಕೂಡಾ ಅವಳಿಂದ ತನ್ನನ್ನು ಅನೇಕ ಶೃಂಗಾರ ಹೆಸರುಗಳಿಂದ ಕರೆಸಿಕೊಂಡಿದ್ದಾನೆ. ಮನೋರಮೆ ಮುದ್ದಣನನ್ನು ರಮಣ, ಎನ್ನೊಡೆಯ ಜಾಣ, ಪ್ರಿಯ ನಲ್ಲ, ಎನ್ನರಸ, ಕಾಮದೇವ, ಮುದ್ದು ಮೊಗದ ಮದನ ಮೋಹನರಾಜ, ಮೈಮೆಗಾರ, ಗಡಸುಗಾರ, ಚೆನ್ನಿಗ, ಎನ್ನರನ್ನ, ಎನ್ನೆರೆಯ, ಮುದ್ದಿನರಸ. ಹೀಗೆ ಬೆಳೆದು ಕೊಂಡು ಹೋಗುತ್ತೆ.

ನಮ್ಮ ಒಂದು ನಾಣ್ನುಡಿ ಕಾರ್ಯೇಷು ದಾಸಿ, ಕರಣೇಷು ಮಂತ್ರಿ. ನಿಮಗೆ ಗೊತ್ತಲ್ವ ಅಂದ್ರೆ, ಹೆಣ್ಣು ಆರುಗುಣಗಳ ಸಂಪನ್ನೆ. ಅವಳು ಗಂಡನಿಗೆ ಕೆಲಸ ಮಾಡಿಕೊಡುವಾಗ ದಾಸಿ, ಸಲಹೆಕೊಡುವಾಗ ಮಂತ್ರಿ ಹೀಗೆ ಇಲ್ಲಿ ಮುದ್ದಣ ಕೂಡಾ ತನ್ನ ಮುದ್ದಿನ ಪತ್ನಿಯನ್ನು ಬೇರೆ ಬೇರೆ ಹೆಸರಿನಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಅವಳನ್ನು ವೈಭವೀಕರಿಸಿದ್ದಾನೆ.

ನೋಡಿ ಅದರ ವಿವರಣೆ ಹೇಗಿದೆ. ಅವಳು ಮುದ್ದಣನಿಗೆ ರಾಜೋಪಚಾರ ಮಾಡುವಾಗ ಪ್ರಾಣೇಶ್ವರಿ, ಸಮಸಮವಾಗಿ ಸೆಣಸುವಾಗ ಗಡಸುಗಾರ್ತಿ, ಕೊಂಕು ಬಿಂಕಗಳನ್ನು ತೋರಿದಾಗ ಅವಳು ಸೆಡಕುಗಾರ್ತಿ, ಸರಯೂ ನದಿಯ ಸೊಂಪಾದ ದಡಗಳನ್ನು ಕಾಣಿಸುವಾಗ ಅವಳು ಪ್ರಿಯೆ, ಕಾಮದ ಹುಣ್ಣಿಮೆಯಲ್ಲಿ ಅವನ ಕಾಮಿನಿ ಕಾಮಕಳಾನಿಧಾನೆಯಾಗುತ್ತಾಳೆ, ರಾಮಾಯಣದ ನೆನಪು ಬಂದಾಗ ರಾಮಾಭಿರಾಮ.

ಹಾಗೆಯೇ ಕಾವ್ಯದಲ್ಲಿ ಒಂದು ಕಡೆ ''ಸಂದೇಯಮಿನ್ನುಂ ಪೋಪುದಿಲ್ಲ'' ಅನ್ನುವಾಗ ಅವನು ಅವಳಿಗೆ 'ಎನ್ನೊಡೆಯ' ನಾಗುತ್ತಾನೆ. ಅಭ್ಯಾಗತರೆಲ್ಲರನ್ನು ಅರಣ್ಯಕನು ಆತಿಥ್ಯದಿಂದ ಸತ್ಕರಿಸಿದನೆಂಬುದನ್ನು 'ಎಂತುಟಾರ್ತಂ' ಅಂತ ಪ್ರಶ್ನಿಸುವಾಗ ಅವನು 'ಚೆನ್ನಿಗ' ನಾಗುತ್ತಾನೆ. ಸಪ್ತಕ್ಷರಿ ಮಂತ್ರದ ಮಹಿಮೆ ಅವನಿಗೆ ತಿಳಿದಿದೆ ಎಂದಾಗ ಅವನು 'ಪೈಂದುಗಾರ' ನಾಗುತ್ತಾನೆ. ಕಥೆ ಮುಗಿಯುತ್ತ ಬಂದ ಹಾಗೆ ಅವನು ಅವಳಿಗೆ ಮುದ್ದು ಮೊಗದ ಚೆನ್ನಿಗರಾಯನಾಗುತ್ತಾನೆ.

ಇಷ್ಟಾಯ್ತಲ್ಲ ಇನ್ನು ನೀವುಂಟು ನಿಮ್ಮ ಹೆಂಡ್ತಿ ನಿಮ್ಮನ್ನ ಕರೆಯುವ ಹೆಸರುಂಟು. ಹೆಂಡ್ತಿ ತನಗೆ ಗಂಡನಿಂದ ಏನಾದರೂ ಕೆಲಸ ಆಗಬೇಕಾದಾಗ ಮುದ್ದುಗರೆಯೋದು ಜಾಸ್ತಿ (ಈಗಿನ ಹೆಂಡತಿಯರಿಗೆ ಗಂಡನಿಂದ ಏನೂ ಆಗಬೇಕಾಗಿಲ್ಲ ಅನ್ನೋದು ಬೇರೆ ಮಾತು. ಆಗಬೇಕಿದ್ದರೆ ಅದು ಡೈವೋರ್ಸ್ ಪತ್ರಕ್ಕೆ ಸಹಿ ಅನ್ನುವ ಮಟ್ಟಕ್ಕೆ ಬಂದಿದೆ ಅನ್ನೋದು ಇನ್ನೊಂದು ಮಾತು) ಆಗ ಏನೇನೋ ಹೆಸರುಗಳು ಬರುತ್ವೆ. ಇನ್ನು ಗಂಡನಾದರೂ ಅಷ್ಟೆ ಅವಳಿಂದ ಏನಾದರೂ ಆಗಬೇಕಾದರೆ (ಏನಾದರೂ ಅಂದರೆ ಏನು ಅಂತ ಕೇಳಬೇಡಿ ಅದರ ಹೊರತಾಗಿ ಇನ್ನು ಏನೇನಾದರೂ ಆಗುತ್ತಲೇ ಇರಬೇಕಾಗುತ್ತದೆ).

ಉದಾ: ತನ್ನ ಕಡೆಯವರು ಬಂದಾಗ ಚೆನ್ನಾಗಿ ಮಾತಾಡಿಸಬೇಕು, ಚೆನ್ನಾಗಿ ನೋಡ್ಕೊಬೇಕು, ಹೆಚ್ಚು ಗೊಣಗಬಾರದು, ಲೊಟಗಬಾರದು ಇತ್ಯಾದಿ ಕೆಲಸಗಳು ಆಗಬೇಕಾದಾಗ ಯಾವ್ಯಾವ್ದೋ ಮುದ್ದಿನ ಹೆಸರಿನಿಂದ ಕರೀಬೇಕಾಗುತ್ತೆ.

ಏಯ್ ಕತ್ತೆ ಅಂದ್ರೆ ಅವಳು ಹೇಗೆ ಕತ್ತೆ ಆಗೋದೇ ಇಲ್ವೋ ಹಾಗೇ ಐಶ್ವರ್ಯ ರೈ ಅಂದ್ರೆ ಅವಳೇನು ಐಶ್ವರ್ಯ ರೈ ಆಗಿಹೋಗೋದಿಲ್ಲ. ಅಂದ್ಮೇಲೆ ಎದ್ ಹೋಗೋ ಮಾತು ಬಿದ್ ಹೋಗ್ಲಿ ಅಂತ ಹಾಗೆ ಕರೆಯೋದ್ರಲ್ಲಿ ತಪ್ಪೇನಿದೆ ಅಲ್ವೆ.

ನೀವು ನಿಮ್ಮ ಹೆಂಡ್ತಿನ ಏನಂತ ಕರೀತೀರ ಅಂತ ನಾನು ಕೇಳಿಲ್ಲ, ನಿಮ್ಮ ಹೆಂಡ್ತಿ ನಿಮ್ಮನ್ನು ಏನಂತ ಕರೀತಾರೆ ಅಂತ ನಾನು ಕೇಳಲ್ಲ ಹಾಗೆ ನೀವೂ ಕೇಳಬೇಡಿ. ಪ್ರೀತಿ ಇರಲಿ, ನಂಬಿಕೆ ಇರಲಿ, ಪರಸ್ಪರ ವಿಶ್ವಾಸ ಇರಲಿ ಇವುಗಳ ನಡುವೆ ಏನೇನಾದರೂ ಹೆಸರು ಬಂದು ಹೋಗಲಿ ಅಷ್ಟಕ್ಕೂ ಅದು between the two ತಾನೇ.



# ವಿಶೇಷ ಲೇಖನಗಳು

**- ನೀರಗುಂದ ಕೇಶವಮೂರ್ತಿ ರಾವ್**

ಸಾಮಾನ್ಯವಾಗಿ ದೀಪಾವಳಿ ಮತ್ತು ಕನ್ನಡ ರಾಜ್ಯೋತ್ಸವ ದಿನ ಹಿಂದು ಮುಂದಾಗಿ ಬರುತ್ತವೆ. ದೀಪಾವಳಿಯ ಬಾಣ ಬಿರುಸು, ಸುರುಸುರು ಬತ್ತಿ; ಪಟಾಕಿಗಳ ಆರ್ಭಟಗಳೆಲ್ಲಾ ಮಾಮೂಲು. ಇದೇ ರೀತಿ ಕನ್ನಡಿಗರ ಕೆಚ್ಚನ್ನು ಹುಚ್ಚೆಬ್ಬಿಸುವ ನವೆಂಬರ್ 1 ಸಹ ಸಂಭ್ರಮದ ದಿವಸ!

ದೀಪಾವಳಿಯ ಪಟಾಕಿಗಳಿಗಿಂತಲೂ ಕನ್ನಡದ (ಕೂಗು) ಆರ್ಭಟ ಗಗನಕ್ಕೆ ಕೇಳಿಸುವಂತಿರುತ್ತದೆ. ಈ ಸಮಯದಲ್ಲಿ ಪ್ರಸಿದ್ಧ ಪತ್ರಿಕೆಗಳು ಹೊರತರುವ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗುವ "ವಿಶೇಷ ಲೇಖನ"ಗಳ ಸೊಗಸು ಸಹ ವಿಶೇಷ!

ನಮ್ಮೂರು ಬಾಗೂರಿನ ಎಚ್ಚೆತ್ತ ಕನ್ನಡ ಸಂಘ ಈ ಸಲ ತನ್ನ ಐವತ್ತನೆಯ ವರ್ಷದ ವಿಶೇಷ ಸಂಚಿಕೆಯನ್ನು ಪ್ರಕಟಿಸಿದೆ. ಈ ಸಂಚಿಕೆಯನ್ನು ಕುತೂಹಲದಿಂದ ತಿರುವಿಹಾಕಿದಾಗ ಇಲ್ಲಿಯ ವಿಶೇಷ ಲೇಖನಗಳು ನನ್ನನ್ನು ಆಕರ್ಷಿಸಿ ಓದಲು ಪ್ರೇರೇಪಿಸಿದುವು. ಕೆಲವು ಶೀರ್ಷಿಕೆಗಳನ್ನು ಗಮನಿಸಿ - 'ರಾಜಕಾರಣದಲ್ಲಿ ನಮ್ಮೂರು,' 'ಜಾತೀಯ ಜಗಳದಲ್ಲಿ ನಮ್ಮೂರು,' 'ನಮ್ಮೂರು ಅತ್ತ-ಇತ್ತ' ಹೀಗೆ ಹತ್ತಾರು ಲೇಖನಗಳನ್ನು ಸ್ಥಳೀಯ ವಿದ್ವಾಂಸರು, ಲೇಖಕರು ಪರಿಚಯಿಸಿರುತ್ತಾರೆ.

ಈ ಸಂಚಿಕೆಯ ಲೇಖಕರನ್ನು ತಮಗೆ ಪರಿಚಯಿಸಬೇಕಾಗಿಲ್ಲ. ಈ ಹಿಂದೆ ಹಲವಾರು ಪ್ರಸಂಗಗಳಲ್ಲಿ ತಮಗೆ ಸಾಂದರ್ಭಿಕವಾಗಿ ಭೇಟಿ ಮಾಡಿಸಿದ್ದೇವೆ. ಎಲ್ಲರೂ ಬಾಗೂರಿನ ಸಿದ್ಧ-ಪ್ರಸಿದ್ಧರೆ! ಶಾಸನದ ಶ್ರೀರಂಗರಾಯರು, ಸಾಹಿತಿ ಸಿಂಗರಾಯರು ಪತ್ತೇದಾರ ಪರಮಶಿವ, ಕುಸ್ತಿ ರಂಗಣ್ಣ ಮತ್ತು ಬುರುಡೆ ಬಾಜೀರಾಯರು ಇವರೆಲ್ಲರ ಲೇಖನಗಳು ಇಲ್ಲಿವೆ. ಈ ಮಹನೀಯರ "ನನ್ನ ಮೊದಲ ...." ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿವೆ. ಓದುಗರಿಗೆ ಖುಷಿ ಕೊಡುವುದರಲ್ಲಿ ಸಂದೇಹವಿಲ್ಲ. ಅವುಗಳ ಸಾಧಾರಣ ಪರಿಚಯ ಮೊದಲಿಗೆ ಶಾಸನ ಶ್ರೀರಂಗರಾಯರು ಬರೆದ "ನನ್ನ ಮೊದಲ ಶಾಸನ ಸಂಶೋಧನೆ ಮತ್ತು ಇತರ ಶಾಸನಗಳ" ಕುರಿತು ಹೀಗೆ ಬರೆಯುತ್ತಾರೆ. ತಾವು ಹಾಸನದಿಂದ ಬಾಗೂರಿಗೆ ಬಂದು ಬೂತನ ತಿಟ್ಟಿನ ಸಮೀಪದ ಶಾಸನ, ದೊಡ್ಡಿ ಮುಂದಿನ ಶಾಸನ, ತಮ್ಮ ಬಾಲ್ಯ ಸ್ನೇಹಿತ ಬುರುಡೆ ಬಾಜೀರಾಯನನ್ನು ಕುರಿತ ಜೀವನ ಚರಿತ್ರೆ ಇತ್ಯಾದಿ. ಪ್ರಮುಖವಾಗಿ ನಾಡಿನ ವಿದ್ವಾಂಸರ ಟೀಕೆ/ಮೆಚ್ಚಿಗೆಗೆ ಗುರಿಯಾದ "ಪಂಪ ಕವಿಯ ಮೇಲೆ ಹೊಸ ಬೆಳಕು"

ಬೀಳುವ ಶಾಸನವಲ್ಲದೆ, ನೃಪತುಂಗ ಕವಿಯ ರಾಜ ಮಾರ್ಗ ಯಾವುದು? ಮತ್ತು ಕನ್ನಡ ಲಿಪಿ ಸುಧಾರಣೆ ಕುರಿತ ಸಂಶೋಧನೆ ಮುಂದುವರಿದಿದೆ ಎಂದು ವಿವರಿಸಿದ್ದಾರೆ.

ಮುಂದಿನ ಲೇಖನ ಸಾಹಿತಿ ಸಿಂಗರಾಯರದ್ದು. ರಾಯರು ತಮ್ಮ ಬರವಣಿಗೆಯ ಬದುಕನ್ನು ವಿವರಿಸುತ್ತ ಬರಹಗಾರನಾಗಬೇಕಾದರೆ ತಾವು ಎಷ್ಟೊಂದು ಕಾಗದವನ್ನು ಹಾಳು ಮಾಡಬೇಕಾಯಿತೆಂದು ಸ್ವಾರಸ್ಯವಾಗಿ ವಿವರಿಸುತ್ತಾರೆ. ಎಷ್ಟೋ ವೇಳೆ ಈ ಹುಚ್ಚು ಹವ್ಯಾಸವನ್ನು ಬಿಟ್ಟು ಮಂಡಿಪೇಟೆಯಲ್ಲಿ "ರೈಟರಾಗಿ"ದ್ದರೂ (ಗುಮಾಸ್ತ) ಸಂಸಾರಸಾಗರದಲ್ಲಿ ಈಜಾಡುತ್ತ ದಡಸೇರಬಹುದಾಗಿತ್ತು. "ಈ ಸಾಹಿತ್ಯದ ಹುಚ್ಚು ಹತ್ತಿ ಬಿಟ್ಟರೆ ಏನಾದರೂ ಗೀಚುವ ತನಕ ಸಮಾಧಾನವಾಗುವುದಿಲ್ಲ." (When once the itch of *literature* comes over a man, nothing can cure it but the secrating of a pen) ಅಂತ ಯಾರೋ ಮಹನೀಯರು ಹೇಳಿದ ಮಾತನ್ನು ಉಲ್ಲೇಖಿಸುತ್ತಾರೆ. ಒಮ್ಮೆ ಬಿಡುವು ಮಾಡಿಕೊಂಡು ಎಲ್ಲರೂ ಓದಬೇಕು.

ಜಾಹಿರಾತುಗಳ ನಡುವೆ ಪ್ರಾರಂಭವಾಗುವ ಪತ್ತೇದಾರ ಪರಮಶಿವನ ಲೇಖನ ಪತ್ತೇ ಮಾಡುವುದೇ ಓದುಗರಿಗೆ ಪ್ರಯಾಸದ ಕೆಲಸ! ವಿವಿಧ ರೀತಿಯ ಬಣ್ಣ ಬಣ್ಣದ ಜಾಹಿರಾತುಗಳನ್ನು ತಿರುವಿಹಾಕುತ್ತ ಕಣ್ಣು ಹಾಯಿಸಿ. ಪತ್ತೇದಾರ ಪರಮಶಿವನ ಸಾಹಸಗಳು ಒಂದೆರಡಲ್ಲ. ಮೊದಲಿಗೆ ಕುಣಿಗಲ್ನಲ್ಲಿ ಕುಡಿದ ಆಸಾಮಿಯೊಬ್ಬ ಕೊಲ್ಲೂರಿನಲ್ಲಿ ಕೊಲೆ ಮಾಡಿ, ಕಿಬ್ಬಳ್ಳಿ ಕ್ರಾಸ್‌ನಿಂದ ಹೋಗ್ತಿದ್ದೋನ್ನ ಹಿರಿಯೂರಿನಲ್ಲಿ ಹಿಡಿದದ್ದು, ಕುಸ್ತಿ ರಂಗಣ್ಣನವರ ಮನೆಯಲ್ಲಿ ಅಮಾಸೆ ದಿವಸ ರಾತ್ರಿ ಮಾತನಾಡುತ್ತ ಇದ್ದಾಗ ಬೇಸ್ತು ಬಿದ್ದ ಪ್ರಸಂಗ, ತನ್ನ ತುಬ್ಬುಗಾರಿಕೆ ಸರ್ವೀಸ್‌ನಲ್ಲೇ ಕ್ಲಿಷ್ಟವಾದ 'ಮೂರು ಗಂಟೆ ಮೂರು ನಿಮಿಷ'ದ ಕುತೂಹಲ ಸಮಸ್ಯೆಯನ್ನು ಬಿಡಿಸಿದ್ದು, ಆ ಸಂದರ್ಭದಲ್ಲಿ ಷರ್ಲಾಕ್ ಹೋಮ್ಸ್, ಜೇಮ್ಸ್ ಬಾಂಡ್, ಪತ್ತೇದಾರ ಪುರುಷೋತ್ತಮ.... ಇಂತಹ ಚಂಡ ಪ್ರಚಂಡರ ಸಾಹಸಗಳೆಲ್ಲಾ ನಿಷ್ಪ್ರಯೋಜಕ ಎನಿಸಿದ್ದು, ಮಧ್ಯರಾತ್ರಿಯಲ್ಲಿ ಮನೆಗೆ ಹೋಗುವಾಗ ಕಂತ್ರಿ ನಾಯಿಯೊಂದರಿಂದ ತಪ್ಪಿಸಿಕೊಳ್ಳಲು ಅಪರೂಪಕ್ಕೆ ಗಸ್ತುತಿರುಗುತ್ತಿದ್ದ ಪೇದೆ ಕೈಗೆ ಸಿಕ್ಕಿ ಬಿದ್ದು ರಾತ್ರಿಯೆಲ್ಲಾ 'ಟೇಷನ್ನ' ನಲ್ಲೇ ಕೊಳೆಯಬೇಕಾದ ರೋಮಾಂಚನಕರ ಘಟನೆಗಳನ್ನು ಮೈನವಿರೇಳುವಂತೆ ಪತ್ತೇದಾರರು ವಿವರಿಸುತ್ತಾರೆ.

ಈ ವಿಶೇಷ ಸಂಚಿಕೆಯಲ್ಲಿ ಬುರುಡೆ ಬಾಜೀರಾಯರು ತಮ್ಮ ಲೇಖನ ಪ್ರಕಟವಾಗಲೇಬೇಕೆಂದು ಸಂಪಾದಕರ ಮೇಲೆ ಒತ್ತಾಯ ತಂದಿದ್ದರಿಂದ ಕೊನೆ ವೇಳೆಯಲ್ಲಿ ಲೇಖನದಲ್ಲಿ ಯಾವ ಬದಲಾವಣೆಯನ್ನು ಮಾಡದೇ ಯಥಾವತ್ತಾಗಿ ಪ್ರಕಟಿಸಬೇಕಾಯ್ತೆಂದು ಸಂಪಾದಕರು ವಿವರಣೆ ಕೊಡುತ್ತಾರೆ. ಬುರುಡೆಯವರ ಸ್ವಾರಸ್ಯಕರ 'ಬುರುಡೆ' ಲೇಖನ ಓದುಗರಿಗೆ ಚುರುಕು ಮುಟ್ಟಿಸುವುದಲ್ಲದೆ, ಖುಷಿಯನ್ನು ಕೊಡಬಲ್ಲದು!

ಕೊನೆಯದಾಗಿ ಬಾಗೂರಿನ ಮತ್ತೊಬ್ಬ ಭವ್ಯ ವ್ಯಕ್ತಿ ಕುಸ್ತಿ ರಂಗಣ್ಣನವರು ತಮ್ಮ ಬಾಲ್ಯದಲ್ಲಿ ಕಾಚಾಕಟ್ಟಿ ಸಡ್ಡು ಹೊಡೆದಾಗಿನಿಂದ ಹಿಡಿದು ಗರಡಿ ಮಡಗಿ ಕುಸ್ತಿ ಪಟುಗಳನ್ನು ತಯಾರಿ ಮಾಡಿದ್ದು, ಹಲವಾರು ಕುಸ್ತಿ ಪಂದ್ಯಗಳನ್ನೇರ್ಪಡಿಸಿ ವಸ್ತಾದಿಗಳಿಗೆ ಸನ್ಮಾನಿಸಿದ್ದು

ಕುಸ್ತಿ ಪಂದ್ಯವೆಂದರೆ ವಸ್ತ್ರಾದಿಗಳಷ್ಟೇ ನೋಡುವವರು ಹೆಣಗಾಡಬೇಕೆಂದು ತಿಳಿಸಿದ್ದು ಇದಲ್ಲದೆ ಮಧುರೆ ಗುಡ್ಡದಲ್ಲಿ ಜೋಡಿ ಹುಲಿ ಶಿಕಾರಿ ಮಾಡಿದ್ದು ಮುಂತಾದ ಸ್ವಾರಸ್ಯ ಸಂಗತಿಗಳನ್ನು ರಂಗಣ್ಣನವರು ತಮಗೆ 'ಓದುಬರಹವು' ಬಾರದ್ದರಿಂದ ಲಿಪಿಕಾರನೊಬ್ಬನಿಗೆ ಹೇಳಿ ಬರೆಸಿದರು. ರಂಗಣ್ಣನವರು ಎಡಗೈ ಹೆಬ್ಬೆಟ್ಟಿನೊಂದಿಗೆ ಲೇಖನ ಮುಕ್ತಾಯ ಗೊಳ್ಳುತ್ತದೆ. ಈ ಲೇಖನದೊಂದಿಗೆ ಅಂದೊಂದಾನೊಂದು ಕಾಲದಲ್ಲಿ ರಂಗಣ್ಣನವರು ಕಾಚಾಕಟ್ಟಿ ಎದುರಾಳಿಗಳೊಂದಿಗೆ ಸೆಣೆಸಾಡಿದ ಕಪ್ಪು ಬಿಳುಪಿನ ಕೆಲವಾರು ಛಾಯಾ ಚಿತ್ರಗಳೂ ಪ್ರಕಟವಾಗಿವೆ.

ಒಟ್ಟಿನಲ್ಲಿ ವಿಶೇಷ ಸಂಚಿಕೆಯ ''ವಿಶೇಷ ಲೇಖನ'ಗಳಲ್ಲದೆ ಇನ್ನೂ ಹಲವಾರು ಲೇಖನಗಳು ಓದುಗರನ್ನು ತೃಪ್ತಿಗೊಳಿಸುತ್ತದೆಂಬುದರಲ್ಲಿ ಸಂಶಯವಿಲ್ಲ. ಮಾರುಕಟ್ಟೆಯಲ್ಲಿ ಮಾಯವಾಗುವ ಮುನ್ನ ಕನ್ನಡಿಗರು ಈ ವಿಶೇಷ ಸಂಚಿಕೆಯನ್ನು ಕೊಂಡು ಓದಿ.



ಕೊರವಂಜಿಯಿಂದ



ಅಲೋ... ಯಾರು... ಹೆಡ್ಮಾಷ್ಟ್ರೇ... ನನ್ಮಗ ಕಿಟ್ಟಿ.... ತಲೆಗೆ ಪೆಟ್ಟುಬಿದ್ದು ನರಳ್ತಾ ಇದಾನೆ... ಈದಿನ ರಜ ಕೊಡಬೇಕು

# ಕುಂತಲ ವೃತ್ತಾಂತ !

- ಚಿತ್ರಾ ರಾಮಚಂದ್ರನ್

"ಪಮ್ಮಿ! ಮೇಲ್ ಬಂದಿದೆ."

ರಾಜುವಿನ ಕರೆ ಕೇಳಿ ಕೈ ಕೆಲಸ ಬಿಟ್ಟು ಓಡಿ ಬಂದಳು ಪದ್ಮಿನಿ. ದೂರ ದೇಶದಲ್ಲಿದ್ದ ಒಬ್ಬಳೇ ಮಗಳು ಕಳುಹಿಸಿರುವ ಮೇಲ್ ನೋಡುವ ಕಾತರ.

ಹರಕೆ ಹೊತ್ತು ಒಪ್ಪತ್ತಿದ್ದು, ಎಷ್ಟೋ ವೈದ್ಯಕೀಯ ಸಲಹೆಗಳನ್ನು ಪಡೆದುಕೊಂಡ ನಂತರ, ಪದ್ಮಿನಿಯ ಮಡಿಲು ತುಂಬಿಸಿದ ಮಲ್ಲಿಗೆಯ ಚೆಂಡು, ಮಗಳು ಸುಧಾ. ನೀಲಮಣಿ ಕಣ್ಣುಗಳು, ಗುಂಗುರು ಗುಂಗುರಾಗಿ ತಲೆ ತುಂಬಿದ್ದ ಕೇಶ ರಾಶಿ, ಬೆಳ್ಳಗೆ ದುಂಡಗೆ ಸೆಲ್ಯುಲಾಯಿಡ್ ಬೊಂಬೆಯಂತಿದ್ದ ಅವಳನ್ನು ಎತ್ತಿ ಆಡಿಸದವರೇ ಆ ವಠಾರದಲ್ಲಿರಲಿಲ್ಲ.

ಮುದ್ದು ಮಗಳು ಬುದ್ಧಿವಂತೆಯೂ ಆಗಿದಿದ್ದರಿಂದ, ಅವಳು ಅಮೇರಿಕೆಗೆ ಹೋಗಿ ಎಮ್.ಎಸ್. ಮಾಡಲು ಬಯಸಿದಾಗ ರಾಜು ಪ್ರೀತಿಯಿಂದ ಪ್ರೋತ್ಸಾಹಿಸಿದ್ದ.

ಪದವೀಧರೆಯಾದ ಮೇಲೆ ಯಾವುದೋ ಸಂಶೋಧನೆಗೆ ತೊಡಗಿ ಇನ್ನೂ ಅಲ್ಲೇ ನೆಲೆಸಿದ್ದಳು ಸುಧಾ. ಈ ಮೇಲ್ ಮಾಡಿಕೊಂಡು, ಫೋಟೋ ಕಳುಹಿಸಿಕೊಂಡು, ಸ್ಕೈಪಲ್ಲಿ ನೋಡಿ ಮಾತನಾಡಿಸಿಕೊಂಡಿದ್ದರೂ ಪದ್ಮಿನಿ ಕೊರಗುತ್ತಲೇ ಇದ್ದಳು. ಈ ರೀತಿ ಅವಳು ಅಲ್ಲೇ ಕೂತಿದ್ದರೆ ಮದುವೆ ಮಾಡುವುದಾದರೂ ಯಾವಾಗ ಎಂಬ ಚಿಂತೆ ಕಾಡುತ್ತಿತ್ತು.

ಮುದ್ದು ಮಗಳನ್ನು ಕಾಣುವ ಕಾತರದಿಂದ ಕಂಪ್ಯೂಟರ್ ಪರದೆಯ ಮೇಲೆ ಕಣ್ಣಾಡಿಸಿದ ಪದ್ಮಿನಿ "ಎಲ್ರೀ ಇವಳು?" ಎಂದಳು. "ಸರಿಯಾಗಿ ಕನ್ನಡಿ ಏರಿಸಿಕೊಂಡು ನೋಡು." ಎಂದ ರಾಜು ಬಂದು ಫೋಟೋ ಜೂಮ್ ಮಾಡಿದ.

"ಇದೇನ್ ಅವತಾರ ಕಣ್ರೀ ಇವಳದ್ದು?"

"ಈ ಅವ್ತಾರದಬ್ಗ್ಗೆ ಬರೆದಿದ್ದಾಳೆ ಕೇಳು. ಅಮ್ಮ ಅಪ್ಪ ಇದು 'ಥ್ಯಾಂಕ್ಸ್‌ಗಿವಿಂಗ್' ಅಂದು ತೆಗೆದ ಫೋಟೋ. ನನ್ನ ಹೊಸ ಹೇರ್‌ಸ್ಟೈಲ್ಗೆ 'ಕಾರ್ನ್ ರೋಸ್' ಅಂತ ಹೆಸರು. ಚೆನ್ನಾಗಿ ಕಾಣಿಸ್ತೀನ? ಇನ್ನು ಒಂದು ತಿಂಗಳವರೆಗಾದರೂ ನಾನು ಕೇಶದ ಆರೈಕೆಯಲ್ಲಿ ಸಮಯ ಕಳೆಯಬೇಕಿಲ್ಲ. ಲವ್ ಯೂ."

"ಕಾರ್ನ್ ರೋಸ್! ಜೋಳದ ಸಾಲುಗಳ ಹಾಗೇ ಕಾಣುತ್ತಲ್ಲ?" ಬೆರಗಿನಿಂದ ಕೇಳಿದ ರಾಜು.

ಸಾವಿರಾರು ಕಂಬಳಿ ಹುಳುಗಳು ತಲೆಯಲ್ಲೆಲ್ಲ ತೆವಳುತ್ತಿದ್ದಂತೆ ಕಂಡ ಆ ಕೇಶಾಲಂಕಾರ ಪದ್ಮಿನಿಗೆ ಜಿಗುಪ್ಸೆಯನ್ನುಂಟು ಮಾಡಿತು.

''ಏನ್ ಕಾರ್ನ್ ರೋಸೋ ಅದೇನು ಕರ್ಮವೋ. ಅಷ್ಟು ಚೆನ್ನಾಗಿದ್ದ ಕೂದಲನ್ನೆಲ್ಲ ಹೀಗೆ ಹಾಳ್ಮಾಡ್ಕೊಂಡಿದ್ದಾಳೆ. ಮದುವೆ ಮಾಡ್ಬೇಕಿರೋ ವಯಸ್ಸು. ಹೀಗೆಲ್ಲ ವೇಷ ಕಟ್ಟಿದ್ರೆ ಯಾವ ಗಂಡು ಒಪ್ತಾನೆ? ಇನ್ನು ಏನೂ ಯೋಚಿಸ್ದೆ ನೀವು ನಗ್ತಾ ಕೂತಿರಿ.''

ಚಿಕ್ಕಂದಿನಲ್ಲಿ ಸುಧಾಳ ಕೇಶದ ಆರೈಕೆ ಎಲ್ಲ ಪದ್ಮಿನಿಗೆ ಸೇರಿದ್ದ ಜವಾಬ್ದಾರಿಯಾಗಿತ್ತು. ಪ್ರತಿ ವಾರ ಎಣ್ಣೆ ಒತ್ತಿ ಸ್ನಾನ ಮಾಡಿಸಿ, ಅಕ್ಕರೆಯಿಂದ ಸಾಂಬ್ರಾಣಿ ಹೊಗೆ ಹಾಕಿ ಅದನ್ನು ಕಾಯಿಸಿ, ನಂತರ ಬ್ರಶ್ ಮಾಡಿ –

ನೀರೊಲೆಯಿಂದ ಕೆದಕಿ ತಂದ ಕೆಂಡದ ಮೇಲೆ ಸಾಂಬ್ರಾಣಿ ಪುಡಿ ಹಾಕಿ, ಒಂದು ಬುಟ್ಟಿಯನ್ನು ಅದರ ಮೇಲೆ ಮಗಚಿ, ಅದರ ಮೇಲೆ ಕೂದಲನ್ನು ಹರಡಿದಂತೆ ಸುಧಾ ಮಲಗಿರಬೇಕಾದರೆ –

ಗುಂಗುರು ಕೂದಲ ರಾಶಿಯಲ್ಲಿ ಸಾಂಬ್ರಾಣಿಯ ಹೊಗೆ ತೂರಿ ಹೋಗುತ್ತಿರಲು, ಇದು ಗರಿ ಕೆದರಿ ಮಲಗಿರುವ ನವಿಲೋ ಇಲ್ಲ ಧರೆಗಿಳಿದು ಬಂದ ದೇವತೆಯೋ ಎಂದನ್ನಿಸುತ್ತಿತ್ತು.

ಕಣ್ಣು ದೃಷ್ಟಿಯಾದೀತೆಂಬ ಭೀತಿಯಲ್ಲಿ ಅದೆಷ್ಟು ಬಾರಿ ನೀವಾಳಿಸುತ್ತಿದ್ದಳೋ ಪದ್ಮಿನಿ.

ಮಗುವನ್ನು ಆರೈಕೆ ಮಾಡುವಾಗ ಅಷ್ಟೇ ಪ್ರೀತಿ ಅಕ್ಕರೆಗಳಿಂದ ತಾನು ಆರೈಕೆ ಮಾಡಿದ್ದ ಕೇಶವನ್ನು ಈ ರೀತಿ ಮಗಳು ಹಾಳು ಮಾಡಿಕೊಂಡಳಲ್ಲ ಎಂಬ ದುಃಖ ಆವರಿಸಿತು.

ಮೊದಲು ಉದ್ದ ಕೂದಲ ಆರೈಕೆ ಕಷ್ಟವೆಂದು ತೋಳವರೆಗೆ ಕತ್ತರಿಸಿಕೊಂಡಿದ್ದಳು ಸುಧಾ. ನಂತರ ಗುಂಗುರುಗಳನ್ನೆಲ್ಲ ನೇರವಾಗಿ ಮಾಡಿಕೊಂಡು ಅದಕ್ಕೆ 'ಸೇಡು' ಎಂದು ಹೆಸರು ಎಂದಳು. ನಂತರ ಸಾಯಿ ಬಾಬಾವತಾರ. 'ಆಫ್ರೋ' ಅಂತೆ! ಯಾವುದೋ ಸಮಾರಂಭಕ್ಕೆ ಮಾಡಿಕೊಂಡಿದ್ದ 'ಸ್ಪೈಕ್' ಅಂತೂ, ತಲೆಯಲ್ಲೆಲ್ಲ ಪುಟ್ಟ ಚೂರಿಗಳು ಮೊಳೆತ ಹಾಗೆ ಕಂಡಿತ್ತು. ಈವಾಗ ಈ ಅವತಾರ.

ಪದ್ಮಿನಿಗೆ ಸಾಕು ಸಾಕಾಗಿ ಹೋಯಿತು. ಕೋಪ ಕುಪ್ಪಳಿಸಿತು. ಹೊತ್ತು ಗೊತ್ತು ಗಮನಿಸದೆ ಆಕ್ರೋಶದೊಡನೆ ಫೋನ್ ಗುಂಡಿಗಳನ್ನು ಒತ್ತಿದಳು. ''ಯಾಕೇ ಹೀಗ್ಮಾಡ್ಕೊಂಡೆ? ಅಂತು ನಿನ್ನ ನಾಟ್ಯ ಪ್ರದರ್ಶನಗಳಿಗೂ ಮಂಗಳ ಹಾಡಿಯಾಯಿತು ಅನ್ನು'' ಪದ್ಮಿನಿಗೆ ಕಂಠ ಬಿಗಿದುಕೊಂಡಿತು.

''ಅಳ್ತಿದ್ದೀಯಾ ಮಾಮ್? ಕಮ್ ಆನ್ ಟೈಟು ಗ್ರೋ ಅಪ್. ಇಲ್ಲಿ ನಕಲೀ ಕೂದಲ ಜಡೆ ಸಿಕ್ಕತ್ತೆ. ನನ್ನ ಪ್ರೋಗ್ರಾಮ್ಗಳೂ ನಡೀತಿವೆ. ರಿಲ್ಯಾಕ್ಸ್! ಒಂದು ಹೇರ್ ಸ್ಟೈಲ್ಗೆ ಇಷ್ಟು ಟೆನ್ಷನ್ ಮಾಡ್ಕೋತಾರಾ?'' ಪದ್ಮಿನಿ ಕೋಪದಿಂದ ಫೋನ್ ಕುಕ್ಕಿದಳು.

ಮೊದಲ ಬಾರಿ ಪದ್ಮಿನಿ ರಾಜುವೊಡನೆ ಅಮೇರಿಕೆಗೆ ಹೋಗಿದ್ದಾಗ ಅಲ್ಲಿ ನಡೆದ ಭಾರತೋತ್ಸವದಲ್ಲಿ ಸುಧಾಳ ನಾಟ್ಯ ಪ್ರದರ್ಶನವೇರ್ಪಾಡಾಗಿತ್ತು. ಇನ್ನೂ ಈ ಸ್ಟೈಲ್ ಭೂತ ಸುಧಾಳನ್ನು ಹಿಡಿದಿರದ ಸಮಯವದು. ಮಗಳಿಗೆ ಬಹಳ ದಿನಗಳ ನಂತರ ಜಡೆ ಹೆಣೆಯ

ತೊಡಗಿದಾಗ ಪದ್ಮಿನಿಗೆ ಮೈ ಪುಳಕವೇರ್ಪಟ್ಟಿತ್ತು. ಎಷ್ಟು ಬಾಚಿ ಬಿಗಿಯಾಗಿ ಹೆಣೆದರೂ ಸುಧಾಳ ಹಣೆಯ ಮೇಲೆ ಏಳುತ್ತಿದ್ದ ವಂಕಿವಂಕಿಯಾದ ಗುಂಗುರುಗಳು ಬೇಲೂರ ಶಿಲಾಬಾಲಿಕೆಯನ್ನೇ ನೆನಪಿಸಿದ್ದವು. ಅಲಂಕಾರ ಮುಗಿಸಿ ಪದ್ಮಿನಿ ಮಗಳ ಮುದ್ದು ಮುಖ ನೀವಾಳಿಸಿದಾಗ, ಅಲ್ಲೇ ನಿಂತು ನೋಡುತ್ತಿದ್ದ ದೇಶೀ ವಿದೇಶೀ ಸ್ನೇಹಿತರೆಲ್ಲ ಗೊಳ್ಳೆಂದು ನಕ್ಕರು. ಸುಧಾಳ ಜಡೆಯ ಬಗ್ಗೆ ಅಸಲೀ ಕೇಶವನ್ನು ಅಷ್ಟು ಉದ್ದವಾಗಿ ಬೆಳೆಸುವುದು ಹೇಗೆ ಎಂಬುದರ ಬಗ್ಗೆ ಪ್ರಶ್ನಿಸಿ "ಸುಧಾಸ್ ಮದರ"ನ್ನು ಅವರೆಲ್ಲ ತಬ್ಬಿಬ್ಬು ಮಾಡಿದ್ದರು.

ಕೋಪಗೊಂಡ ರಾಧೆಯ ಅಭಿನಯದಲ್ಲಿ, ತಲೆಯ ಮೇಲೆ ಚಿನ್ನದ ನಾಗರನ್ನ ಮುಡಿದಿದ್ದ ಕಾರಣ, ಉದ್ದವಾದ ಹಾವಿನಂತೆಯೇ ಕಂಡ ತನ್ನ ಜಡೆಯನ್ನು ಒಮ್ಮೆ ಒಗೆದು, ಕೊರಳ ಸುತ್ತ ಹಾರದಂತೆ ಸುಧಾ ಹಾಕಿಕೊಂಡಾಗ, ಸಭಾಂಗಣವೇ ಕರತಾಡನದಿಂದ ಕಂಪಿಸಿತು.

"ಇವಾಗೇನಪ್ಪ ಅಂದ್ರೆ ನಕಲಿ ಜಡೆ ಮುಡ್ಕೊಳ್ತಾಳಂತೆ." ಪದ್ಮಿನಿ ಆತಂಕ ತಡೆಯಲಾರದೆ ಜೋರಾಗಿಯೇ ಗೊಣಗಿದಳು.

"ಪದ್ಮಿನಿ! ಕಾಮ್‌ಡೌನ್! ಇಷ್ಟಕ್ಕೆಲ್ಲ ಉದ್ರೇಕ ಗೊಂಡ್ರೆ ಹೇಗೆ? ಎಲ್ಲ ಸರಿ ಹೋಗುತ್ತೆ ಬಿಡು."

ರಾಜು ಸಮಾಧಾನವಾಗಿ ಅವಳ ಭುಜ ತಟ್ಟಿದ.



ರಾಘವೇಂದ್ರ ಅವರ ಮಗ ಸುಧಾಳಿಗೆ ತಕ್ಕ ವರನೆಂದು ರಾಜುವಿನ ಗೆಳೆಯ ಸಲಹೆ ನೀಡಿದ್ದ. ರಾಜು ಪದ್ಮಿನಿ ಇಬ್ಬರೂ ಅವರ ಮನೆಗೆ ಹೋಗಿ ಜಾತಕ ಪರಿವರ್ತನೆ ಮಾಡಿಕೊಂಡು ಬಂದಿದ್ದರು. ಇಂದು ಗಂಡಿನ ಮನೆಯವರ ಸರದಿ. ಪದ್ಮಿನಿ ಸಡಗರದಿಂದ ತ್ವರಿತವಾಗಿ ತಿಂಡಿ ಕಾಫಿ ತಯಾರಿಸಿದಳು. ಪದ್ಮಿನಿಗೆ ರಾಘವೇಂದ್ರ ಅವರ ಮನೆಯವರ ರೀತಿ, ನೀತಿ, ಸಂಸ್ಕೃತಿ ಎಲ್ಲ ಬಹಳ ಮೆಚ್ಚಿಗೆಯಾಯಿತು. ತಿಂಡಿ ಉಪಚಾರವೆಲ್ಲ ಮುಗಿಯಿತು.

ಮೊಗ್ಗಿನ ಜಡೆ ಹಾಕಿಕೊಂಡು ಕನ್ನಡಿಯ ಮುಂದೆ ನಿಂತು ನಗುತ್ತಿದ್ದ ಆರು ವರ್ಷದ ಸುಧಾಳ ಫೋಟೋ ಕೈಗೆತ್ತಿಕೊಂಡು, "ಮುದ್ದಾಗಿದ್ದಾಳೆ, ಅಂದ ಹಾಗೆ ನಿಮ್ಮ ಮಗಳ ಲೇಟೆಸ್ಟ್ ಫೋಟೋ ಏನಾದ್ರು ಇದ್ರೆ ಕೊಡಿ. ನಮ್ಮವರಿಗೆಲ್ಲ ತೋರಸ್ಬೇಕಾಗುತ್ತೆ." ಎಂದು ಕೇಳಿದರು ಭಾವಿ ಬೀಗತ್ತಿ.

"ಓ ಅದಕ್ಕೇನಂತೆ ಮೇಲಲ್ಲಿ ಕಳಿಸ್ತಾನೇ ಇರ್ತಾಳೆ, ನಿಮ್ಮ ಮೇಲ್ ಐ.ಡಿ. ಕೊಟ್ರೆ ನಾನು ನಿಮ್ಗೆ ಕಳಿಸ್ಬಿಡ್ತೀನಿ." ಉತ್ಸಾಹದಿಂದ ನುಡಿದ ರಾಜುವನ್ನು ದುರುಗುಟ್ಟಿಕೊಂಡು ನೋಡಿದಳು ಪದ್ಮಿನಿ.

"ಇಲ್ಲ ಇಲ್ಲ, ಅದನ್ನೆಲ್ಲಾ ನಿನ್ನೆ ತಾನೆ ಡಿಲೀಟ್ ಮಾಡ್ಬಿಟ್ಟೆ. ಸುಧಾಗೆ ಹೇಳಿ ಒಂದು ಹೊಸತಾದ ಒಳ್ಳೆ ಫೋಟೋ ತರಿಸಿಕೊಡ್ತೀನಿ." ಎಂದು ಅವಸರವಸರವಾಗಿ ನುಡಿದಳು ಪದ್ಮಿನಿ."

ಅತಿಥಿಗಳು ಹೊರಟು ಹೋದ ನಂತರ ರಾಜು ಆಶ್ಚರ್ಯದಿಂದ ಕೇಳಿದ. "ಇಲ್ಲ ಕಣೆ, ಮೊನ್ನೆ ಮೊನ್ನೆ ತಾನೆ ಥ್ಯಾಂಕ್ಸ್ ಗೀವಿಂಗ್ ಫೋಟೋ ಬಂದಿದೆ. ಅಷ್ಟರಲ್ಲಿ ಯಾಕೆ ಡಿಲೀಟ್ ಮಾಡ್ಬಿಟ್ಟೆ?"

"ನೀವೊಂದು ಪೆಕ್ರು, ಹುಡ್ಗಿ ನೋಡಕ್ಕೆ ಬಂದವರಿಗೆ ಕೊಡೋಂತ ಫೋಟೋನೆ ಅದು? ನಿಮ್ಗೂ ಬುದ್ದಿ ಇಲ್ಲ, ನಿಮ್ಮ ಮಗ್ಳಿಗೂ ಬುದ್ದಿ ಇಲ್ಲ." ಹರಿದುಬಿದ್ದಳು ಪದ್ಮಿನಿ.

"ಪಮ್ಮಿ ನೀನಿನ್ನೂ ಆಗಿನ್ ಕಾಲ್ದಲ್ಲೇ ಇದ್ದೀಯ. ರೂಪ ನೋಡಿ ಮದ್ವೆ ಆಗೋ ಕಾಲಾನೆ ಇದು? ವಿದ್ಯಾಭ್ಯಾಸ, ಹುದ್ದೆ ಮನಸ್ಸಿನ ಪಕ್ವ, ಹೊಂದಾಣಿಕೆ, ಇದೇ ಅಲ್ವೇನೆ ಮುಖ್ಯ? ನಮ್ಮ ಮಗಳು ಇರೋ ಹಾಗೇ ಯಾರು ಮದುವೆಯಾಗ್ತಾರೋ ಆಗ್ಲಿ ಬಿಡು."

ಮೊಗ್ಗಿನ ಜಡೆಯ ಸುಧಾ ಫೋಟೋದಿಂದ "ಗ್ರೋ ಅಪ್ ಮಾಮ್" ಅಂದ ಹಾಗಾಯಿತು. ಪದ್ಮಿನಿಗೆ ದುಃಖ ಉಮ್ಮಳಿಸಿ ಬಂದಿತು.



ಇತ್ತೀಚೆಗೆ ಸುಧಾ ಫೋಟೋಗಳನ್ನ ಕಳುಹಿಸುವುದನ್ನೇ ಬಿಟ್ಟಿದ್ದಳು. ಸ್ಕೈಪಲ್ಲಿ ಬರಲೂ ಕೂಡ ಆಗದಷ್ಟು ಬಿಡುವಿಲ್ಲದ ಕೆಲಸವೆಂದು ಮೇಲ್ ಮಾಡಿದ್ದಳು.

'ಮಮ್ಮಿ, ನಿನ್ನ ಇಷ್ಟದಂತೆ ಈ ವರ್ಷ ನಾನು ಮದುವೆಯಾಗಲು ನಿರ್ಧರಿಸಿದ್ದೇನೆ. ಡಿಸೆಂಬರ್ ತಿಂಗಳಲ್ಲಿ ಇಂಡಿಯಾಗೆ ಬರುತ್ತೇನೆ.' ಈ ಮೇಲ್ ನೋಡಿದ ಪದ್ಮಿನಿಗೆ ಹೊಟ್ಟೆಗೆ ಹಾಲೆರದಂತೆ ಆಯಿತು.

ಕೊನೆಗೂ ತನ್ನ ಮಗಳು ತನ್ನನ್ನು ಅರ್ಥ ಮಾಡಿಕೊಂಡಳು. ಡಿಸೆಂಬರಲ್ಲಿ ಬರೋವಾಗ ಉದ್ದ ಜಡೆ ಬೆಳೆಸಿಕೊಂಡ್ಡೇ ಬರುತ್ತಾಳೇನೋ! ಅದಕ್ಕೆ ಮತ್ತೆ ಯಾವ ಫೋಟೋನೂ ಕಳುಹಿಸಿಲ್ಲ, ನನಗೆ ಸರ್ಪ್ರೈಸ್ ಕೊಡ್ತಾಳೇನೋ. ಪದ್ಮಿನಿ ಹಾರಾಡಿದಳು. ಅವಳು ಬಂದ ಕೂಡಲೇ ರಾಘವೇಂದ್ರ ಅವರ ಮಗನೊಡನೆ ಭೇಟಿ ಮಾಡಿಸಬೇಕು. ಹಪ್ಪಳ ಸಂಡಿಗೆ ಉಪ್ಪಿನ ಕಾಯಿ ಅಂತ ಏರ್ಪಾಟುಗಳು ಶುರುವಾದವು.

"ಇನ್ನೂ ಈ ಇಡೀ ವರ್ಷ ಕಳೆಯಬೇಕಲ್ಲೇ" ಎಂದರೂ, ರಾಜು ಮದುವೆ ಅದ್ದೂರಿಯಿಂದಾಗಬೇಕಲ್ಲವೇ?

ಒಮ್ಮೆ ಫೋನಿನಲ್ಲಿ ಮಾತನಾಡಿದಾಗ ಕುತೂಹಲ ತಡೆಯಲಾರದೆ ರಾಜು "ಯಾಕಮ್ಮ ಈಚೆಗೆ ಫೋಟೋ ಕಳಿಸೋದಿಲ್ಲ?" ಎಂದು ಕೇಳಿದ್ದ.

"ಸುಮ್ನೆ ಯಾಕೆ ಟೆನ್ಷನ್ ಡ್ಯಾಡ್? ಹೇಗೂ ಬರ್ತಾ ಇದ್ದೀನಲ್ಲ." ಎಂದಿದ್ದಳು ಸುಧಾ.

"ಅದ್ಸರಿ, ಈವಾಗ ಅದೇನು ಸ್ಟೈಲ್ ಮಾಡ್ಕೊಂಡಿದ್ದೀಯ?" ಮಗಳ ಕೇಶ ವರ್ಧಕದ ವಿಚಾರ ಕೇಳಿದಾಗ 'buzz off dad' ಎಂದಿದ್ದಳು ಸುಧಾ.

ಏನು ಅರ್ಜೆಂಟೋ ಎಂದು ರಾಜು ಮಾತು ಮುಗಿಸಿಕೊಂಡ. ಪದ್ಮಿನಿ ಎಲ್ಲಿಲ್ಲದ ಸಂಭ್ರಮದೊಡನೆ ಮಗಳ ಬರುವಿಕೆಗಾಗಿ ಮನೆಯನ್ನು ಸ್ವಚ್ಛಗೊಳಿಸತೊಡಗಿದಳು.

ಬಟ್ಟೆಬರೆ, ಪೀಠೋಪಕರಣಗಳು, ಹೊಸಟಿಂಬು ಕಂಬಳಿ ಎಲ್ಲ ತಂದು ಸುಧಾಳ ಕೋಣೆಯಲ್ಲಿ ತುಂಬಿದಳು. ಮಗಳ ಕೇಶಾಲಂಕಾರವನ್ನು ಮೂರು ಕಡೆಗಳಿಂದಲೂ ಪ್ರತಿ ಬಿಂಬಿಸಬಲ್ಲ ಮೂರು ಕನ್ನಡಿಗಳ ಅಲಂಕಾರದ ಮೇಜನ್ನು ತನ್ನ ಕೋಣೆಯಿಂದ ತೆಗೆದು ಮೆರುಗು ಹಾಕಿಸಿ ಸುಧಾಳ ಕೋಣೆಯಲ್ಲಿರಿಸಿದಳು. ಹಾವಿನಂತಹ ಜಡೆಯನ್ನು ತೋಳಲ್ಲಿ ಇಳಿಬಿಟ್ಟು ಬರಲಿರುವ ಮಗಳ ಸುಂದರವಾದ ಮುಖ ಕಣ್ಣಲ್ಲಿ ಕಟ್ಟಿದಂತಿತ್ತು.

★★★

ವಿಮಾನ ನಿಲ್ದಾಣದಲ್ಲಿ ಪದ್ಮಿನಿ ರಾಜು ಇಬ್ಬರೂ ಗಂಟೆಕಾಲ ತಪಸ್ಸು ಮಾಡಿದರು. ನಿರ್ದಿಷ್ಟ ಸಮಯಕ್ಕೆ ಪ್ರಯಾಣಿಕರೆಲ್ಲ ಒಬ್ಬೊಬ್ಬರಾಗಿ ಹೊರ ಬರಲಾರಂಭಿಸಿದರು. ಪದ್ಮಿನಿ ಗಾಜಿನ ಕಿಟಕಿಯ ಮೂಲಕ ಮೈ ಎಲ್ಲ ಕಣ್ಣಾಗಿ ತುದಿಗಾಲಲ್ಲಿ ನಿಂತು ಹುಡುಕಿದಳು.

''ಅಲ್ನೋಡು ಪಮ್ಮಿ! ಸುಧಾ!'' ರಾಜು ಸರಸರ ಬಾಗಿಲತ್ತ ಹೆಜ್ಜೆಹಾಕಿ ಹೊರಗೆ ಬಂದ ಮಗಳನ್ನು ತಬ್ಬಿಕೊಂಡ. ಫ್ಯಾಷನ್ ಪತ್ರಿಕೆಯ ಕವರ್ ಪೇಜ್ ಹುಡುಗಿಯಂತೆ ಕಂಡ ಮಗಳ ಮುಖ ನೀವಾಳಿಸಿ ಅಪ್ಪಿಕೊಂಡಳು ಪದ್ಮಿನಿ. ಮನೆಗೆ ಹಿಂತಿರುಗಿ, ಆ ಅರ್ಧ ರಾತ್ರಿಯಲ್ಲೂ ಸುಧಾ ಅಮ್ಮನ ಕೈ ಊಟ ಸವಿದಳು. ಬೆರಳುಗಳನ್ನ ಈರುಳ್ಳಿ ಗೊಜ್ಜಿನಲ್ಲಿ ಅದ್ದಿ ನೆಕ್ಕಿದಳು.

''ಸೂಪರ್ ಊಟ ಮಾಮ್. ನಿನ್ನ ಕೈ ಊಟ ತಿಂದು ಎಷ್ಟು ವರ್ಷಗಳಾಗಿ ಹೋಯ್ತು.'' ಪದ್ಮಿನಿಯ ಹೃದಯ ತುಂಬಿ ಬಂದಿತು.

ಮಾತುಕಥೆ ಎಲ್ಲ ಮುಗಿದು ಮಲಗೋ ಹೊತ್ತಾಯಿತು.

''ಮಲಗೋ ಹೊತ್ತಲ್ಲಿ ಈ 'ಸ್ಕಾರ್ಫ್' ಯಾತಕ್ಕೆ? ತೆಗೀ ಬಾರ್ದೆ?''

ಪದ್ಮಿನಿ ಮಗಳ ಕೇಶದ ಬೆಳವಣಿಗೆ ಕಾಣಲು ಕುತೂಹಲಳಾದಳು.

''ಬಂದ್ಕೂಡ್ಲೇ ತೆಗೀಬೇಕಿತ್ತು. ಮಾತಲ್ಲಿ ಮರೆತೇಹೋಯ್ತು.'' ಎನ್ನುತ್ತ 'ಸ್ಕಾರ್ಫ್' ತೆಗೆದ ಸುಧಾಳನ್ನು ಕಂಡು ಪದ್ಮಿನಿ ವಿಲಿವಿಲಿ ಒದ್ದಾಡಿ ಬಿಟ್ಟಳು.

ಚಕಿತಗೊಂಡ ರಾಜು ಕೂಡ, ''ಇದೇನಮ್ಮ?'' ಎಂದ.

''ಸಡನ್ನಾಗಿ ಈ ಐಡಿಯಾ ಹೊಳೀತು. ನಾನು ನನ್ನ ಕಲೀಗ್ ಇಬ್ಬರೂ ಒಂದೇ ರೀತಿ ಮಾಡಿಸ್ಕೊಂಡೆವು. 'buzz off' ಸ್ಟೈಲ್‌ಗಿಂತ ಇದು ಬಾಳ 'ಕಂಫಿ'. ಕಾಲನಿಯೋಗ, ಅದೂ ಕೇಶಕ್ಕೋಸ್ಕರ ಮಾಡೋದು ಸಂಶೋಧನೆಗೆ ಎಷ್ಟು ಅಡ್ಡಿಯಾಗತ್ತೆ ಗೊತ್ತೆ?'' ಮಾತನಾಡುತ್ತಲೇ ತನ್ನ ನುಣ್ಣನೆಯ ಬೋಳು ತಲೆ ಸವರಿ ಕೊಂಡಳು ಸುಧಾ!

''ಐಯ್ಯೋ ಹೆಮ್ಮಾರಿ! ಎಷ್ಟು ಬಿದ್ದು ಬಿದ್ದು ನಿನ್ಗೆ ಮೇಲ್ ಕಳಿಸ್ದೆ. ಹೀಗೆ ಕುತ್ತಿಗೆ ಕುಯ್ದು ಬಿಟ್ಟಲ್ಲೇ? ರಾಘವೇಂದ್ರ ಅವರ ಮಗ ನಿನ್ನ ನೋಡಕ್ಕೆ ಬರೋವಾಗ.'' ಪದ್ಮಿನಿ ಜ್ವರ ಬಂದವಳಂತೆ ಮಾತನಾಡಲಾರದೆ ತೊದಲಿದಳು.

''ಮಮ್ಮಿ, ಯೋಚ್ನೆ ಬಿಡು, ನನ್ನ ವರನನ್ನು ನಾನು ಆಗ್ಲೇ ಆಯ್ದುಕೊಂಡಿದ್ದೀನಿ. ವಿಷಯ ನೇರವಾಗಿ ಹೇಳಿ ಆಶೀರ್ವಾದ ಪಡೆಯ ಬೇಕಂತ್ಲೇ ಬಂದೆ.''

''ಹಾ?''

''ಹೌದಪ್ಪ, ನನ್ನ ಕಲೀಗ್ ಎರಡು ವರ್ಷಗಳಿಂದ ಪರಿಚಯ, ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡ್ಕೊಂಡಿದ್ದೀವಿ.''

ಮಾತನಾಡುತ್ತಲೇ ಸುಧಾ ಬ್ಯಾಗಿನಿಂದ ಒಂದು ಫೋಟೋ ತೆಗೆದಳು. ನುಣ್ಣನೆಯ ಬೋಳು ತಲೆ ಹುಡುಗನನ್ನು ಕಾಣುವ ನಿರೀಕ್ಷೆಯಲ್ಲಿ ರಾಜುವಿಗಿಂತ ಮೊದಲು ತಾನೇ ಫೋಟೋ ಕಸಿದುಕೊಂಡ ಪದ್ಮಿನಿ, ಫೋಟೋ ನೋಡಿ ಅವಕ್ಕಾದಳು.

ಸೊಂಪಾಗಿ ಬೆಳೆದಿದ್ದ ಕೇಶರಾಶಿಯನ್ನು ಪೋನಿಟೇಲಾಗಿ ಕಟ್ಟಿಕೊಂಡು, ಕಿವಿಯಲ್ಲಿ ಕಡುಕು ಮಿನುಗುತ್ತಿರಲು, ಮಿಂಚಿನ ನಗೆ ಬೀರುತ್ತಿದ್ದ ಪದ್ಮಿನಿಯ ಭಾವಿ ಅಳಿಯ! ಪದ್ಮಿನಿ 'ಗ್ರೋಅಪ್' ಆಗಲು ಯತ್ನಿಸಿದಳು!





# ಚಪರ್‌ಕಾಯಲು

- ಶ್ಯಾಮಲಾ ರವಿಶಂಕರ್

"ಶುಕ್ಲಾಂ ಬರಧರಂ..." ಅನ್ತಿದ್ದಾಗೆ ಫೋನ್ ಟ್ರಿಣ್‌ಗುಟ್ಟಿತು. ಥೂ ಈ ಬಿ.ಎಸ್.ಎನ್.ಎಲ್. ಯಾಕಿಷ್ಟು efficient ಅಂತ ಬೈದುಕೊಳ್ತಾ ರಿಸೀವರ್‌ನ ತೊಗೊಂಡೆ. ಆ ಕಡೆಯಿಂದ ಎದುರು ಫ್ಲಾಟ್‌ನಲ್ಲಿರುವ ಸೋನಿಯಾ "ಏನಾಯ್ತು, ಆ ಪಾಟಿ ಜನ ನಿನ್ನ ಮನೆ ಮುಂದೆ, ಎಲ್ಲಾ ಕ್ಷೇಮವೇ?" ಅಂದಳು. "ದಿನಾ ಇರೋದೇ ತಾನೇ, ಯಾರೋ ಆಟೋ ಡ್ರೈವರ್‌ಗಳೋ ಇನ್ಯಾರ್‍ಯಾರೋ ನಮ್ಮನೆ ಮುಂದೆ ಕಾನ್‌ಫರೆನ್ಸ್ ಮಾಡ್ಕೋ ತಾನೇ ಇರ್ತಾರೆ. ಅದಕ್ಯಾಕೆ ನೀನು ತಲೆ ಕೆಡಿಸ್ಕೋತಾ ಇದ್ದೀಯಾ" ಅಂದು ರಿಸೀವರ್ ಕುಕ್ಕಿ ಮತ್ತೆ "ಶುಕ್ಲಾಂ..." ಅಂತ ಅಂದೆ. ಅಷ್ಟರಲ್ಲಿ ಇವರ ಮೊಬೈಲು! ಪುಣ್ಯಕ್ಕೆ ಅವರೇ ಉತ್ತರಿಸ್ತಾ ಇದ್ರು. ನಾನು ತಿರುಗಾ "ಶುಕ್ಲಾಂ..." ಅಂತ ಪೂಜೆಗೆ ಪ್ರಾರಂಭಿಸಿದೆ. ಅಷ್ಟರಲ್ಲಿ ಹಿತ್ತಲ ಬಾಗಿಲ್ನಿಂದ ಚುಮ್ಮಿ ಸುನಾಮಿ ಥರಾ ಬಂದು, "ಹೊರಗ್ಹೋಗಿ ನೋಡೇ, ನಿನ್ನ ಮನೆ ಹೊರಗೆ ನಡೀತಿರೋ ಸಂತೇನಾ? ಊರಿಗೆ ಊರೇ ಅಲ್ಲಿ ನೆರೆದಿದ್ರೂ ನೀನು ಮಾತ್ರ ನಿನ್ನದೇ ಆದ ಪ್ರಪಂಚದಲ್ಲಿರ್ತೀಯಾ!" ಅಂದ್ಬಿಟ್ಟು ಹೇಗೆ ಬಂದ್ಳೋ ಹಾಗೇ ಅದೃಶ್ಯಳಾದಳು.

ನಮ್ಮ ಮನೆ ಇರೋದು ಕಾರ್ನರ್ ಸೈಟಿನಲ್ಲಿ ಅದೂ ಮೈನ್ ರೋಡ್ ಹತ್ತಿರ. ಚಿಳ್ಳೆ ಪಿಳ್ಳೆ ಮೀಟಿಂಗುಗಳಿಗೆ ಹೇಳಿ ಮಾಡಿಸಿಟ್ಟಂತಹ ಸ್ಥಳ. ಜೊತೆಗೆ ಗಿಡ ಮರಗಳನ್ನು ಪೋಷಿಸಿದ್ದೇನೆ. ಒಂದೆರಡು ಕಲ್ಬೆಂಚುಗಳನ್ನು ಹಾಕಿಸಿದ್ದೇವೆ. ಇನ್ನೇನು ಬೇಕು ಸಾರ್ವಜನಿಕರಿಗೆ. ಯಾವಾಗ್ಲೂ ರೋಡಿನ ಗಲಾಟೆ ನಮ್ಮ ಮನೇಲೇ! ಅದಕ್ಕೆ ನಾವೆಲ್ಲಾ ಅಭ್ಯಾಸವಾಗ್ಬಿಟ್ಟು, ಹೊಂದ್ಕೊಂಡಿದ್ದೀವಿ. ನಮ್ಮ ಮನೆಗೆ ಬಂದ ಗೆಳೆಯರೊಬ್ಬರು ಇಲ್ಲಿ ಮಲಗಲಾರದೆ ರಾತ್ರೋ ರಾತ್ರಿ ನಮ್ಮ ರಸ್ತೆಯಂಚಿನ ಆಚೆ ಬದೀಲಿ ಇರೋ ಗುಡೀಲಿ ಹೋಗಿ, ಅಲ್ಲಿನ ಜವಾನನಿಗೆ ಒಂದು ರಾತ್ರಿ ಇಲ್ಲಿ ಮಲಗ್ತೀನೀಂತ ಹರಸ್ಕೊಂಡಿದ್ದೀನಿ' ಅಂತ ಬುರುಡೆಬಿಟ್ಟು ತಣ್ಣಗೆ ಅಲ್ಲಿ ಮಲಗಿದ್ದು, ಸುಪ್ರಭಾತದ ರೆಕಾರ್ಡಿನ ದೆಸೆಯಿಂದ ತಾವೂ ಎದ್ದು ಮನೆಗೆ ಬಂದ್ರು! ಇದೆಲ್ಲಾ ಸೈಡ್ ಟ್ರ್ಯಾಕಾಯಿತು ಬಿಡಿ.

ಕಡೆಗೂ ಮನೆ ಹೊರಗೆ ಹೋಗಿ ನೋಡಿದ್ರೆ ನಿಜವಾಗ್ಲೂ ಜನವೇ ಜನ! ಅದರ ಮಧ್ಯದಲ್ಲಿ ಹೆಣ್ಣೊಂದು ಕೂತು ತಾರಕೇಶ್ವರಿ ಎಂಬಂತೆ ಸಿಂಹರಾಗದಲ್ಲಿ (ಹಾಡು?) ಕೂಗಾಡ್ತಾ ಇದ್ದಾಳೆ! ಇದೂ ನನಗೇನು ಹೊಸದಲ್ಲ, ಆದರೆ, ಆ ಹೆಂಗಸಿನ ಧ್ವನಿ ಬೆಕ್ಕಿನ ರಾಗದ ಅವತಾರದಲ್ಲಿ ನಾನು ಕೇಳಿದ್ದೆ "ಅರೆ...ರೆ... ಇವಳು ನಮ್ಮ ಕೆಲಸದ ಹುಡುಗಿ,

ಯಾದಮ್ಮ!'' ತಕ್ಷಣ ಆ ಗುಂಪನ್ನು ಬೇಧಿಸಿ ಒಳಹೊಕ್ಕ ನನ್ನನ್ನು ನಾನು ಬಾಯ್ಬಿಡುವ ಮೊದಲೇ ಅವಳು ಹಿಡ್ಕೊಂಡು 'ಹೋ..ಹೋ..' ಅಂತ ಅಳುತ್ತಾ ತನ್ನ ಶೃತಿ ಪೆಟ್ಟಿಗೆ ಏರಿಸಿದ್ದೇ ಅಲ್ಲದೆ ಎದೆ ಮೇಲೆ ಮೃದಂಗವನ್ನೂ ಬಾರಿಸಲು ಪ್ರಾರಂಭಿಸಿದಳು! ತಬ್ಬಿಬ್ಬಾದ ನಾನು ಅವಳನ್ನು ಸಂತೈಸುವ ಯತ್ನದಲ್ಲಿ, 'ಅಳ್ಬೇಡಮ್ಮಾ ಬಾ ಮನೆ ಒಳಗೆ ಬಂದು ಸಮಾಧಾನ ಮಾಡ್ಕೊ. ಆಮೇಲೆ ವಿಚಾರ ಮಾಡೋಣವಂತೆ' ಅಂದೆ. ಇದರಿಂದ ನಿರಾಶರಾದ ಸತ್ಪ್ರಜೆಗಳು ''ಇಷ್ಟಕ್ಕೇನಾ, ನಾವೆಲ್ಲ ಕಾದಿದ್ದುದು? ವೇಸ್ಟು ಟೈಂ ವೇಸ್ಟು'' ಎಂದುಸಿರುತ್ತಾ ಸಡಿಲಗೊಳ್ಳಲಾರಂಭಿಸಿದರು. ಆದರೆ ನನ್ನ ಕರ್ಮಕ್ಕೆ ಯಾದಮ್ಮ ಚಕ್ಕಂಬಕ್ಳು ಹಾಕ್ಕೊಂಡು ನೀಟಾಗಿ ಪಟ್ಟಾಗಿ ಕೂತೇ ಬಿಟ್ಲು. ಅಲ್ಲದೆ ಹೋ...ಹೋ... ಕಾರ ನಿರಾತಂಕವಾಗಿ ನಡೆಸುತ್ತಿದ್ದಳು. ಅವಳ ಅವತಾರ ನೋಡಿದವರು 'ನಾನೇನೋ ಅವಳಿಗೆ ಮಹತ್ತರವಾದ ಅನ್ಯಾಯ ಮಾಡಿದ್ದೀನಿ' ಅಂದ್ಕೋಬೇಕು. ನಮ್ಮ ಶಿಷ್ಯ ವೃಂದ ಹರತಾಳಕ್ಕೆ ಹೋಗುವಾಗ ಇವಳಿಂದ ಒಂದೆರಡು ಪಾಠಗಳನ್ನು ಕಲಿಯಬಹುದಾಗಿತ್ತು! ನನ್ನ ಪುಸಲಾಯಿಕೆ ನೋಡುತ್ತಿದ್ದ ಕಡೆ ಕಡೆಯ ಸತ್ಪ್ರಜೆಗಳು ''ಈಕೆ ನೋಡಿದ್ರೆ ಗೊತ್ತಾಗೋಲ್ವಾ ಎಷ್ಟು exploit ಮಾಡಿದ್ದಾರೋ ಅಂತ. ಆ ಕೆಲಸದವಳನ್ನ! ಈಗ ಏನೋ ಮಹಾ ಅಂತ ಮಾತಾಡಿರೋದು, ಮರ್ಯಾದೆ ಕೊಡ್ತಿರೋದು ನೋಡಿದ್ರೇನೇ ಗೊತ್ತಾಯ್ತು ನಂಗೆ ಏನು ಜನಾನೋ'' ಎಂದ್ಕೊಳ್ತಾ ಜಾಗ ಖಾಲಿ ಮಾಡ್ತಿದ್ರು.

ಇನ್ನು ಹೆಚ್ಚು ಹೊತ್ತು ಹೀಗೆ ಕಳೆದ್ರೆ ವಾರ್ತಾ ಪತ್ರಿಕೆಗಳಿಗೆ ಸುಗ್ಗಿ ಎಂದ್ಕೊಂಡು ಯಾದಮ್ಮನನ್ನು ನಾಲ್ಕು ಗೋಡೆಗಳ ಮಧ್ಯೆ ರವಾನಿಸಿದ್ರೆ ಸಾಕಪ್ಪಾ ಅಂದ್ಕೊಂಡ್ರೆ 'ಉಹುಂ' ಎಂದು ಚಿರ ಪ್ರತಿಷ್ಠಿತಳಾಗಿದ್ದೇ ಅಲ್ಲದೆ ಅಳುವಿನ ಎರಡನೆಯ inningsಗೆ ಪೀಠಿಕೆ ಹಾಕಿದ್ಲು!

ಕಡೆಗೂ ನಾನು ಪುಸಲಾಯಿಸಿ ಬೆಣ್ಣೆ ಹೊಡೆದದ್ದರ ಫಲ ಲಭಿಸಿಯೇ ಬಿಡ್ತು! ಯಾದಮ್ಮ ನಮ್ಮ ವರಾಂಡ ಹೊಕ್ಕವಳೇ ಧೊಪ್ಪನೆ ಬಿದ್ಲು ಮಹರಾಯ್ತಿ. ''ಇಷ್ಟಕ್ಕೂ ಏನು ಕೊಳ್ಳೇ ಹೋಯ್ತೇ, ಹೀಗಾಡ್ತಾ ಇದೀಯಾ?'' ಅಂದದ್ದಕ್ಕೆ ಅವಳ ಶೃತಿ ಪೆಟ್ಟಿಗೆ ಬಟನ್ automatic ಆಗಿ ಆನ್ ಆಗ್ಹೋಯ್ತು!

''ಸರಿ, ಬಿಡು, ನೀನೇನೂ ಈಗ ಹೇಳ್ಬೇಡ, ನಾನು ಒಂದು ನಿದ್ರೆ ಇಂಜೆಕ್ಷನ್ ಕೊಡ್ತೀನಿ. ಆಮೇಲೆ ಎಲ್ಲಾ ಸರಿ ಹೋಗತ್ತೆ'' ಅಂದೆ.

''ಅಯ್ಯಯ್ಯೋ, ಇಂಜಕ್ಷನ್ ವಮ್ದು ವದ್ದಮ್ಮಾ'' ಅಂತ ಇನ್ನಷ್ಟು ಅತ್ತಳು. ''ಚರ್ಪಕಾಯಲೂ.... ಓ ನಾ ಚರ್ಪಕಾಯಲೂ'' ಅನ್ನೋ ಪದ incidentaliy ಹೊರ ಬಿತ್ತು! ಜೊತೆಗೆ ಅವಳು ಮೂರ್ಛೆ ಬಂದಂತೆ ತೆಪ್ಪಗೆ ಬಿದ್ಕೊಂಡಳು. ಗಂಟಲಿಗೆ ವಿರಾಮ ಬೇಕಿತ್ತೇನೋ.

ಈಗ ಶುರು ನನ್ನ ಪೀಕಲಾಟ. ಇಷ್ಟೊಂದು ವರ್ಷ ತೆಲುಗಿನಾಡಿನಲ್ಲಿದ್ದು ಎಷ್ಟೊಂದು ತೆಲುಗು ಕಲಿತುಕೊಂಡರೂ ಇನ್ನೂ ನನಗೆ ಬಾರದೆ ಇರುವ ಪದಗಳಲ್ಲೊಂದು ''ಚರ್ಪಕಾಯಲು'' ಅನ್ನೋ ಪದ! ಹಾಗಂದ್ರೇನು? ಅದೇನು ಸರ್ಪಗಳ ಮೊಟ್ಟೆಗ್ಳಾ?, ಅಥವಾ ಇನ್ನೆಂಥಾದ್ರು ಕಾಯಾ? (ಈಗ ನನ್ನ ಸಸ್ಯಶಾಸ್ತ್ರ ಜ್ಞಾನಕ್ಕೆ ಸವಾಲು?) ಅದು

ಹೇಗಿರತ್ತೆ? ಇವಳಿಗೂ ಆ ದರಿದ್ರದ ಕಾಯಿಗೂ ಏನು ಬಾದರಾಯನ ಸಂಬಂಧ? ಇವಕ್ಕೆಲ್ಲ ಉತ್ತರ... "ಓ ನಾ ಚರ್ಪಕಾಯಲೂ..." ಅನ್ನೋ ಶಯಿಬಿವಾದ್ಯ: ಇದರ ಮಧ್ಯೆ ನನ್ನ ಪ್ರಶ್ನೆಗಳೆಲ್ಲಾ ಅರಣ್ಯರೋದನವಂತೆ.

ಸ್ವಲ್ಪ ಉದಾಸೀನಾನೇ ಸರಿ ಇವಳಿಗೆ ಅಂದ್ಕೊಂಡು I went back to my "ಶುಕ್ಲಾಂ.... ಬರ ಧರಂ....". ಅಲ್ಲಿಂದ ಮುಂದಕ್ಕೆ ಮತ್ತೆ ವಿಘ್ನ! obviously due to "ಓ... ಚರ್ಪಕಾಯಲೋ..." ಅನ್ನೋ ಮೂರನೇ inningsನಿಂದ. ಯಾಕೋ ಇವತ್ತು ಸರಿ ಇಲ್ಲ ಅಂತ ದೇವರಿಗೆ ಒಂದು ಸೆಲ್ಯೂಟ್ ಹೊಡೆದು ಯಾದಮ್ಮನ ಕೇಸ್ ಹಿಯರಿಂಗ್‌ಗೆ ನಡೆದೇ ಬಿಟ್ಟೆ.

"ನನ್ನ ಮಾತು ಕೇಳಿಸ್ಕೊ, ಅದಕ್ಕೆ ಸರಿಯಾಗಿ ಉತ್ತರಿಸು, ಇಲ್ಲದಿದ್ರೆ ಸೀದಾ ಹೊರಗೆ ನಡಿ" ಅಂದ್ಬಿಟ್ಟು "ಆ, ಶನಿ 'ಚರ್ಪಕಾಯಲು' ಅಂದ್ರೆ ಏನು, ಅದಕ್ಕೂ ನಿನಗೂ ಇದ್ದ ಬದ್ದ ಉಸಾಬರಿ ಏನು? ಎಲ್ಲಾ ನೀಟಾಗಿ ಹೇಳು, ಅದೂ ನಿನ್ನ ಧ್ವನಿ ತಗ್ಗಿಸಿ, ಹುಷಾರು" ಎಂದೆ ಸೂತ ಪುರಾಣಿಕರು.... ಎನ್ನುವ ಶೈಲಿಯಲ್ಲಿ.

"ಚರ್ಪಕಾಯಲು.... ಪೋಯೆ ನಮ್ಮೋ... ಹೋ..ಓ".

"ಹೌದಮ್ಮಾ, ಗೊತ್ತಾಯ್ತಲ್ಲ ಆ ವಿಷಯಾ, ಇನ್ನು ಮುಂದೆ ನಡೀಲಿ ನಿನ್ನ ಪ್ರಲಾಪ. ಅದೇನು, ಅದರಿಂದ ನಿನಗಾದ ಅಪಘಾತ ಇತ್ಯಾದಿಗಳನ್ನು ಹೇಳು."

"ಅದೇ, ಚರ್ಪಕಾಯಲಂಟೇ ಬಟ್ಟಲಕು ಪೆಟ್ಟೇದಿ" ಅಂದಳು.

"ಓಹೋ, ಗುಂಡಿನಾ?"

ಅದಲ್ಲಾ, ಎಂದು, ಮತ್ತೊಮ್ಮೆ....

"ಸರಿ, ಕುಂಕುಡು (ಅಂಟುವಾಳದ) ಕಾಯಲಾ? "ಸೀಗೇಕಾಯಾ?"

"ಅಯ್ಯೋ, ಅಯ್ಯೋ ನೀಕು ತೆಲೀದಾ? ನೀವು ಕೂಡ ವಾಡ್ತಾವು?"

"ಹಾಗಾದರೆ ನನ್ನ ಮನೆಯಲ್ಲಿ ಎಲ್ಲಿದೆಯೋ ಆ ಚ.ಕಾ. ತೋರಿಸು" ಎಂದೆ. ತೂರಾಡ್ತಾ ಬಿಕ್ಕುತ್ತಾ ಎದ್ಹೋಗಿ ಸರ್ಫ್ ಡಬ್ಬ ತಂದಳು. ಇನ್ನೊಂದು ರೌಂಡ್ ಅವಾಂತರದ ನಂತರ 'ಕಾಯಲು' ಅಂದರೆ 'ಡಬ್ಬಗಳು' ಎಂದು ಇದು ಈಸ್ಟ್ ಗೋದಾವರಿ ಜಿಲ್ಲೆಯ ಬೆಸ್ತರ ತೆಲುಗಿನಲ್ಲಂತೆ! ಅರ್ಥವಾಯಿತು. ಓ.ಕೆ. ಈಗ ಅಳು ಯಾತಕ್ಕೆ ಅಂದ ತಪ್ಪಿಗೆ ಮತ್ತೆ ಗಂಗಾ, ಭವಾನಿಗಳ ಪ್ರವಾಹದಲ್ಲಿ ಅರ್ಥವಾದದ್ದಿಷ್ಟು.

ಒಂದು ಪ್ಲಾಸ್ಟಿಕ್ ಗೋಣೀಚೀಲದಲ್ಲಿ ನಾಲ್ಕಾರು (?) ಚರ್ಪಕಾಯಗಳನ್ನು ತಂದು ನಮ್ಮ ಹೂ ಗಿಡಗಳ ಮಧ್ಯೆ ಹಿಂದಿನ ಸಂಜೆ ತಂದಿಟ್ಟದ್ದುದು ಈಗ ಇಲ್ಲವಂತೆ. Big deal! ನನಗೆ ಉರಿದ್ಹೋಯ್ತು. ನನಗೆ ಹೇಳದೆ ಇದ್ದಮೇಲೆ ನನಗೆ ಆ ವಿಷಯ ಗೊತ್ತೇ ಇಲ್ಲ. ಇಷ್ಟಕ್ಕೂ ಬೆಳಗ್ನಿಂದ ನಮ್ಮನೇಗೆ ಯಾರೊಬ್ಬರೂ ಬಂದೂ ಇರಲಿಲ್ಲ, ಇವಳು ಸುಳ್ಳು ಹೇಳ್ತಿರಬೇಕು. ಮಹಾ, ಇವಳೇನು ಸರ್ಫ್ ಅಂಗಡಿ ಇಟ್ಟಿದ್ದಾಳೆಯಾ, ಅದೂ ಅಲ್ಲದೆ ಇದೇ ಸರ್ಫ್ ಪುಡಿ ತುಂಬಿದ್ದುದು ಅಂತಾಳೆ! ಯಾರೂ ಕೊಟ್ಟಿಲ್ಲವಂತೆ. ತಾನೇ ಊರಿಗೆ ಹೋಗೋಕೆ ಅಂತ ಕೂಡಿ ಹಾಕ್ತಿದ್ಳಂತೆ ಆ ಡಬ್ಬಗಳನ್ನು!

What a thing to take home!   ಎಲ್ಲಾ ಬುರುಡೆ!

ಅಷ್ಟರಲ್ಲಿ ನಮ್ಮ ಡ್ರೈವರ್ ಪಟ್ಟಾಭಿ ಬಂದ. ವಿಷಯ ತಿಳಿದ ಮೇಲೆ ಅವನು ನೆನ್ನೆ ರಾತ್ರಿ ಆ ಚೀಲ ನೋಡಿ ಅದರಲ್ಲಿ RDX ಇರಬಹುದೋ ಏನೋ ಅಂದುಕೊಂಡು. ಇನ್ನೊಂದು ಕ್ಷಣ ಅದು ಯಾರೋ ಕಳ್ಳದ ಸಾಗಾಣಿಕೆ - ಇರಬಹುದೇನೋ ಅಂದುಕೊಂಡು ಹೇಳಿದರೆ ನಾವೆಲ್ಲಿ ಗಾಬರಿ ಪಡ್ತೀವೋ ಅನ್ನೋ ಸದುದ್ದೇಶದಿಂದ ಆ ಚೀಲನ ದೊಡ್ಡ ಮೋರೀಲಿ ಹಾಕಿ ಮನೇಗೆ ಹೊರಟ್ಹೋದ್ನಂತೆ!

"ಅಯ್ಯೋ, ಶಿವನೇ, ಇದೇನು ಗ್ರಾಚಾರ ಬಂತಪ್ಪಾ? ನಮ್ಮನೇಗೆ ಯಾರು, ಯಾಕೆ, ಏನಿದೇಂತ ಬಾಂಬು ಹಾಕ್ತಾರೆ? ನಿಂದು ತುಂಬಾ ಅತಿಯಾಯ್ತು." ಅಂದದಕ್ಕೆ, "ಯಾಕೆ, ಅಮ್ಮಾವ್ರೇ, ಮರೆತು ಬಿಟ್ರಾ ಮೂರು ವರ್ಷದ ಹಿಂದೆ ಪೋಲೀಸ್ ಹಿಡಿದಿದ್ದ ಕಳ್ಳ ನಮ್ಮ ತೋಟಾನ ತೋರಿಸಿ ಅಲ್ಲಿ ಬಚ್ಚಿಟ್ಟಿದ್ದ ಚೂರಿ ತೋರ್ಸಿ ತೆಗೀಲಿಲ್ವಾ? ಮೊನ್ನೆ ಮೊನ್ನೇನೆ ಎಲ್ಲಿಂದ್ಲೋ ಬಂದಿದ್ದ ಮೂರು ಜೊತೆ ಹೊಸಾ ಚಪ್ಪಲಿಗಳು ಹಾಗೇ ಮಾಯವೂ ಆಗ್ಲಿಲ್ವಾ? ಅಂದ ಹಾಗೇ...."

"ಓ... ಪಟ್ಟಾಭಿ, Stop it! ನೀನು ಹೇಳೋದೆಲ್ಲ ಕೇಳ್ತಾ ಇದ್ರೆ ನಮ್ಮ ಹೂತೋಟ ಕಳ್ಳರ (ಚಿಲ್ಲರೆ ಕಳ್ಳರ) transit dump yard ಅಂತ ಅಂದ್ಕೋಬೇಕು. ಈಗ ಇವಳ ಕೇಸು ಮುಗಿಸಬೇಕು.

ಇವಳಿಗೆ ದುಡ್ಡು ಕೊಟ್ರೆ ಬೇಡಾಂತಾಳೆ, ಡಬ್ಬ ಕೊಟ್ರೆ ಬೇಡಾಂತಾಳೆ. ಮತ್ತೆ ಅವಳು ಕೇಳಿದಷ್ಟು ಚರ್ಪಕಾಯಿಗಳನ್ನೇ ಕೊಂಡುತಂದು, ಎಲ್ಲಿಂದಲಾದ್ರೂ (ವಾಸನೆ ಹಿಡಿದಿರುವ!) ಪ್ಲಾಸ್ಟಿಕ್ ಚೀಲದಲ್ಲಿ ಹಾಕೇ ಕೊಡ್ಬೇಕಾ? ಅದೂ, ಗಿಡಗಳ ಮಧ್ಯೇನೇ ಇಡಬೇಕಾ? ಇದೇನು ಶಿವಲೀಲೆ, ನೋಡ್ಕೋ, ನೀನೆ ಅಂದೆ.

ನಮ್ಮ ಪಟ್ಟಾಭಿಯ ಶಾರೀರದ ಮುಂದೆ ಯಾದಮ್ಮನ ಶ್ರುತಿ ಪೆಟ್ಟಿಗೇನ ನಿವಾಳಿಸಿ ಹಾಕ್ಬೇಕನ್ನಿ! ಅವನು ಒಮ್ಮೆಲೇ ಗರ್ಜಿಸಿದ.

"ಅಮ್ಮಾವ್ರು ಏನೋ ಒಂದಿಷ್ಟು ದುಡ್ಡು ಕೊಡ್ತಾರೆ. ಅದಕ್ಕೆ ಎಷ್ಟು ಚರ್ಪಕಾಯೋ, ಅದಿನ್ಯಾವ ಕಾಯೋ ಕೊಂಡ್ಕೊಂಡು ಹೋಗು - ಇಲ್ಲದೇ ಇದ್ರೆ ನೀನು ಅವನ್ನು ಕದ್ದು ಮುಚ್ಚಿಟ್ಟಿದ್ದೆ ಎಂದು ಪೋಲೀಸರಿಗೆ ಕಂಪ್ಲೆಂಟ್ ಕೊಡ್ತೀನಿ. ತಿಳೀತಲ್ಲಾ?"

ಒಮ್ಮೆಲೇ ತೆಪ್ಪಗಾಯ್ತು, ನಮ್ಮ ಈ ಚರ್ಪಕಾಯಿ ಸಂಗ್ರಹಣೆ! ನಾನೂ ಏನೋ ಋಣ ಅಂತ ಒಂದಿನ್ನೂರು ರೂಪಾಯಿ ಅವಳ ಕೈಗೆ ಹಾಕಿ ಕೈ ತೊಳ್ಕೊಂಡೆ.



# ಕಾಫೀ ಹೌಸ್

ಹೊಸ ವರ್ಷ ಬಂದಾಗ ಕಂಡ ಕಂಡವರಿಗೆಲ್ಲ 'ಹ್ಯಾಪಿ ನ್ಯೂ ಈಯರ್' ಎಂದು ಧಾರಾಳವಾಗಿ, ಆದರೆ ಒಮ್ಮೊಮ್ಮೆ ಯಾಂತ್ರಿಕವಾಗಿ, ಪ್ಯೂರ್ ಇಂಗ್ಲಿಷ್‌ನಲ್ಲಿ ವಿಶ್ ಮಾಡುವಾಗ ನನಗೆ ಎಚ್ಚೆನ್ ನೆನಪಿಗೆ ಬರುತ್ತಾರೆ. ಅಲ್ಲಪ್ಪಾ ಎಲ್ಲರಿಗೂ ಹ್ಯಾಪಿ ನ್ಯೂ ಈಯರ್ ಎಂದು ಹೇಳ್ತೀವಿ ಆದರೆ ಎಲ್ಲರಿಗೂ ಹ್ಯಾಪಿ ಆಗಿರುತ್ತೇನು? ಎಂದು ಕೇಳುತ್ತಿದ್ದರು. ನಿಜವೇ. 2008 ಉದಯಿಸಿದಾಗ ಹೀಗೆ ಸಿಕ್ಕಸಿಕ್ಕವರಿಗೆಲ್ಲ ವಿಶ್ ಮಾಡಿದ್ದೇ ಮಾಡಿದ್ದು. ನಮ್ಮ ಪ್ರೆಸಿಡೆಂಟ್, ಪ್ರೈಮ್ ಮಿನಿಸ್ಟರ್ ನಮಗೆಲ್ಲ ಟೀವಿ, ರೇಡಿಯೋ ಪತ್ರಿಕೆಗಳ ಮೂಲಕ ಹೀಗೆ ವಿಶ್ ಮಾಡಿದ್ದರು. ಆದರೆ ಏನಾಯ್ತು ನೋಡಿ. ಅನಾಹುತ ಒಂದೇ ಎರಡೇ... ಆದರೂ ಈ ವರ್ಷ ಮತ್ತೆ ಅದೇ ಸಂಭ್ರಮ. ಹಿಸ್ಟರಿ ರಿಪೀಟ್ಸ್ ಇಟ್ ಸೆಲ್ಫ್ ಎನ್ನುವಂತೆ ಮತ್ತೆ ವಿಶ್ ರಿಪೀಟ್ಸ್ ಇಟ್ ಸೆಲ್ಫ್. ಆದರೆ 2009ನಲ್ಲಿ ಅದೇನೇನು ಕಾದಿದೆಯೋ ಬಲ್ಲವರಾರು. ಆದರೂ ನಮ್ಮ ಆಶಯಗಳು ಮಾತ್ರ ಹಲವಾರು ಇವೆ. ಸ್ಟಾಕ್ ಮಾರ್ಕೆಟ್ ಹಳೇ ಹಾದಿ ಹಿಡಿಯಲಿ, ಅಂದರೆ ಮೇಲೇರಲಿ ಆದರೆ ಬೆಲೆಗಳು ಕೆಳಗೆ ಇಳಿಯಲಿ; ನೆರೆ ರಾಷ್ಟ್ರದಿಂದ ನುಸುಳುವ ಎಕೆ 47 ಮಂದಿ ತಮ್ಮ ಬಂದೂಕುಗಳಿಗೆ ತುಸು ವಿಶ್ರಾಂತಿ ನೀಡಿ ತಮ್ಮ ಹೆಂಡತಿ ಮಕ್ಕಳು, ಅವರು ಇಲ್ಲದಿದ್ದರೆ ಅಪ್ಪ ಅಮ್ಮನಾದರೂ ಇರಬೇಕಲ್ಲವೆ? ಅವರೊಂದಿಗೆ ಕಾಲ ಕಳೆಯುತ್ತಾ ಅಲ್ಲಾನ ನೆನಪಿನಲ್ಲಿ ಸಮಯ ದೂಡಲಿ; ಮುಂಬರುವ ನಮ್ಮ ಚುನಾವಣೆಯಲ್ಲಿ ಯೋಗ್ಯರಷ್ಟೇ ಆರಿಸಿ ಬರುವುದು ಸಾಧ್ಯವಿಲ್ಲವಾದ್ದರಿಂದ ಕಡಿಮೆ ಅಯೋಗ್ಯರಾದರೂ ಆರಿಸಿ ಬರಲಿ; ಬೆಂಗಳೂರಿನಲ್ಲಿ ಧಾರಾಕಾರವಾಗಿ ಮಳೆ ಸುರಿದು ರಸ್ತೆಗಳು ಹಾಳಾಗದಿರಲಿ; ಮಗ ಸೊಸೆಗೆ ರಾಜಕೀಯ ಬಿಟ್ಟು ದೇವೇಗೌಡರು ದೇವರ ಸ್ಮರಣೆಯಲ್ಲಿ ತಮ್ಮ ಮುಂದಿನ ದಿನಗಳನ್ನು ಕಳೆಯುವಂತಾಗಲಿ; ಹುರುಳಿಕಾಯಿ ಸೇಬುಹಣ್ಣಿನ ಬೆಲೆ ಜತೆ ಸ್ಪರ್ಧೆಗೆ ಇಳಿಯದಿರಲಿ ..... ಹೀಗೆ ಒಂದೇ ಎರಡೇ ನನ್ನ ಆಶಯಗಳು... ಆದರೆ ಹೀಗೆ ಕನಸು ಕಾಣ್ತಿದ್ದಾಗ ಎಚ್ಚೆನ್ ನೆನಪಿಗೆ ಬರೋದೇ! ಛೆ!!

**- ಆನಂದ**

ಹೊಸ ವರ್ಷ ಅಂದ್ರೆ ನಿರೀಕ್ಷೆಗಳು ತುಂಬಾ ಇರುತ್ತೆ. ಆದರೆ ಈ ಹೊಸ ವರ್ಷಕ್ಕೆ ನನ್ನ ನಿರೀಕ್ಷೆ ಏನೆಂದರೆ ಪಾಕೀಸ್ಥಾನದಲ್ಲಿ ಭಯೋತ್ಪಾದನೆ ನಿಂತು ಹೋಗಲಿ, ಅವರು ಬೇರೆ ದೇಶದಲ್ಲಿ ದಾಂಧಲೆ ಎಬ್ಬಿಸುವುದನ್ನು ನಿಲ್ಲಿಸಲಿ, ಸುಳ್ಳು ಹೇಳುವುದನ್ನು ಬಿಡಲಿ, ಭಾರತದೊಂದಿಗೆ ಸ್ನೇಹದಿಂದಿರ್ತೀವಿ ಅಂತ ಅಲ್ಲಾನ ಮೇಲೆ ಪ್ರಮಾಣ ಮಾಡಲಿ, ಕಾಶ್ಮೀರದ ವಿಚಾರದಲ್ಲಿ ಯು.ಎನ್. ಹೇಳಿದ ಹಾಗೆ ಒಪ್ಪಿಕೊಳ್ಳುತ್ತೇನೆ ಅಂತ ಮಾತು ಕೊಡಲಿ ಅಂತೆಲ್ಲ ಅನಿಸುತ್ತೆ. ಇನ್ನು ನಮ್ಮದೇ ನಾಡಿಗೆ ಬಂದರೆ ಎಲ್ಲ ರಾಜಕೀಯ ಪಕ್ಷಗಳೂ ಬಿ.ಎಸ್.ವೈ ಅವರಿಗೆ ಬೆಂಬಲ ಕೊಟ್ಟು ಕರ್ನಾಟಕವನ್ನು ನಿಜವಾಗಲೂ ಮಾದರಿ ರಾಜ್ಯವನ್ನಾಗಿ ಮಾಡಲಿ,

ಸರ್ಕಾರೀ ನೌಕರರು, ಅಧಿಕಾರಿಗಳು ಲಂಚ ಅಂದರೆ ಮಾರು ದೂರ ಹೋಗಲಿ, ಎಲ್ಲ ಸರ್ಕಾರಿ ಕೆಲಸಗಳೂ ಒಂದು ಭೇಟಿಯಲ್ಲೇ ಮುಗಿದು ಹೋಗಲಿ, ಪೋಲೀಸಿನವರು ಎಲ್ಲ ನಾಗರಿಕರೊಂದಿಗೆ ಸ್ನೇಹದಿಂದಿರಲಿ, ನಮ್ಮ ಸಿನಿಮಾ ನಿರ್ಮಾಪಕರೂ ರೀಮೇಕ್ ಮಾಡೋದಿಲ್ಲ ಅಂತ ನಿರ್ಧಾರ ಮಾಡಲಿ, ಎಲ್ಲ ಸರ್ಕಾರೀ ಕಛೇರಿಗಳಲ್ಲಿ ಕನ್ನಡ ನಲಿಯಲಿ, ಕರ್ನಾಟಕದಲ್ಲಿ ನೆಲೆಸಿರುವ ಎಲ್ಲ ಅನ್ಯ ಭಾಷಿಗರೂ ಕನ್ನಡದಲ್ಲೇ ಮಾತಾಡಲಿ (ಕನ್ನಡದವರೂ ಸೇರಿಕೊಂಡು). ನಾನು ಇದೆಲ್ಲ ಬರಿತಿರುವಾಗ ಪಕ್ಕದಲ್ಲೇ ಬಂದು ನಿಂತ ನನ್ನ ಹೆಂಡತಿ ಅಲ್ಲರೀ ಅಷ್ಟುದ್ದ ಬರೆಯೋ ಬದಲು ನಮ್ಮ ದೇಶದಲ್ಲಿ ರಾಮರಾಜ್ಯ ನೆಲಸಲಿ ಅಂತ ಒಂದೇ ಸಾಲಿನಲ್ಲಿ ಬರೆಯಬಹುದಿತ್ತಲ್ಲವಾ ಅಂತ ರಾಗ ಎಳೆದಾಗ ಹೌದಲ್ಲ ಅದೂ ಸರಿ ಅನಿಸಿತು. ಆಗುತ್ತೋ ಬಿಡುತ್ತೋ ಅಂದ್ಕೊಳೋಕೇನು ಕಷ್ಟ ಅಲ್ವೇ.

**- ಬೇಲೂರು ರಾಮಮೂರ್ತಿ**

ಹೊಸ ವರುಷಕೆ ನಿಮ್ಮ ಆಶಯವೇನು ಅಂತ ಪ್ರತಿವರ್ಷ ನನ್ನನ್ನು ಎಲ್ಲರೂ ಕೇಳುವವರೇ? ಪ್ರತಿವರ್ಷವೂ ತೆಪ್ಪಗೆ ಇದ್ದುಬಿಡುತ್ತಿದ್ದೆ. ಆದರೆ ಏಜಿಂಗ್ ಫ್ಯಾಕ್ಟರ್ ಅಂತ ಒಂದು ಇರುತ್ತೆ ನೋಡಿ ಅದು ನಿಮ್ಮನ್ನ ತೆಪ್ಪಗೆ ಇರಲು ಬಿಡದು. ಈ ಸಲ ನಿಮ್ಮ ಆಶಯವೇನು ಅಂತ ಕೇಳಿದವರಿಗೆ ಅಂತಲೆ ಒಂದು ಉದ್ದನೇ ಪಟ್ಟಿ ತಯಾರಿಸಿ ಇಟ್ಟುಕೊಂಡಿದ್ದೇನೆ. ಅದರಲ್ಲಿ ಬಹು ಮುಖ್ಯವಾದವು ಹೀಗಿವೆ:

★ ಬೆಂಗಳೂರಿನಲ್ಲಿ ಟ್ರಾ/ಡ್ರಾಫಿಕ ಜಾಮು ಇರಬಾರದು. ದೇವನಹಳ್ಳಿಯಿಂದ ಜಯನಗರಕ್ಕೆ ಹನ್ನೆರಡೇ ನಿಮಿಷದಲ್ಲಿ ಹೋಗುವ ಹಾಗಿರಬೇಕು. ★ ಕೊಲೆ, ಸುಲಿಗೆ, ಕಳ್ಳತನ ಮೊದಲಾದ ಪೇಪರು ನ್ಯೂಸುಗಳಿಗೆ ಅವಕಾಶವೇ ಇರಕೂಡದು. ಇಡೀ ಪ್ರಪಂಚ ಸಭ್ಯವಾಗಿ, ಸಜ್ಜನವಾಗಿ ಪುಣ್ಯ ಕೋಟಿಯಂತಿರಬೇಕು. ಖಂಡವಿದೆಕೋ, ಮಾಂಸವಿದೆಕೋ ದುಷ್ಟ ವ್ಯಾಗ್ರನೆ ತಿಂದು ಸಂತಸದಿಂದಿರು ಅನ್ನುವ ಪದ್ಯವನ್ನು ಇಡೀ ಪ್ರಪಂಚ ಬೇರೆಯವರಿಗೆ ಹೇಳುವಂತಿರಬೇಕು! ★ ತಂದೆ ಮಕ್ಕಳ, ಮಾವ ಸೊಸೆಯ, ತಾತ ಮೊಮ್ಮಕ್ಕಳ....... ಹೀಗೆ ನೂರೆಂಟು ಪರ್ಮುಟೇಷನ್-ಕಾಂಬಿನೇಷನ್‌ಗಳ ಫ್ಯಾಮಿಲಿ ರಾಜಕೀಯದಿಂದ ಈ ದೇಶದ ಬಡ ಜನತೆಗೆ ಖಾಯಂ ಮುಕ್ತಿ ದೊರೆಯಬೇಕು! ★ ಅರವತ್ತು ಮೀರಿರುವ ರಾಜಕೀಯ ಧುರೀಣರು ಖಂಡಿತ-ಇಲ್ಲ ಪೆರಲೈಸ್ ಆಗಬೇಕು ಇಲ್ಲ ಸ್ವಯಂ ನಿವೃತ್ತಿ ಘೋಷಿಸಿಕೊಂಡು ತೆಪ್ಪಗೆ ಮೊಮ್ಮಕ್ಕಳು ಮರಿ ಮಕ್ಕಳನ್ನು ಆಡಿಸಿಕೊಂಡೋ ಅಥವಾ ಗುಡ್ಡೆ ಹಾಕಿರುವ ಹಣದ ಮೂಟೆಯನ್ನು/ರಾಶಿಯನ್ನು ಎಣಿಸಿಕೊಂಡೋ ರಾಮಕೃಷ್ಣಾಂತ ಇರಬೇಕು! ★ ಮತ್ತೆ ಎಮ್.ಎನ್.ಸೀ.ಗಳು, ಬಿ.ಪಿ.ಓ.ಗಳು ದೇಶಾದ್ಯಂತ ಚಿಗುರೊಡೆದು ನಮ್ಮ ಹೈಕಳಿಗೆ ಕೈತುಂಬಾ ಸಂಬಳ, ಕಾರು, ಬಂಗಲೆ ಸಿಗುವುದಲ್ಲದೇ - ಸ್ವರ್ಗಕ್ಕೆ ಕಿಚ್ಚು ಹಚ್ಚುವ ವಾತಾವರಣ ಪುನಃನಿರ್ಮಾಣವಾಗಬೇಕು. ★ ಭಯೋತ್ಪಾದನೆ, ಬಾಂಬು ಮತ್ತು ಅಮಾಯಕರ ಪ್ರಾಣಹಾನಿಯಿಲ್ಲದೆ ಪ್ರತಿಯೊಬ್ಬರ ಜೀವನ ನಿರಾಂತಕವಾಗಿ ಸುಖ ಸಂತೋಷ ಸಮೃದ್ಧಿಯಿಂದ ಇರಲಿ ಅಂತ ತುಂಬಾ ಚಿಕ್ಕದಾದ ಆಶಯವನ್ನು ಇಡೀ ಜಗತ್ತಿಗೆ ಬೀರಲು ಇಷ್ಟಪಡುತ್ತೇನೆ. ಸ್ವಂತವಾಗಿ ನನಗೇನೂ ಆಶಯ ಇಲ್ರೀ ಯಾಕೆಂದರೆ ನಾನು ಈಗಾಗಲೇ ಸಂತೃಪ್ತ!

**-ಎಚ್. ಗೋಪಾಲಕೃಷ್ಣ**

# ಖಟ್ಮಾಂಡುವಿನಲ್ಲೊಂದು ಸಂಜೆ

**- ನಂದಿನಿ ಕಾಪಡಿ**

ನಾಲ್ಕೈದು ವರ್ಷಗಳ ಹಿಂದೆ. ನೇಪಾಳ ದೇಶದಲ್ಲಿ ರಾಜನ ವಿರುದ್ಧ ಅಶಾಂತಿ ಪ್ರಾರಂಭವಾಗಿದ್ದರೂ ಇನ್ನೂ ದೇಶದ ಪ್ರವಾಸೋದ್ಯಮದ ಮೇಲೆ ಯಾವುದೇ ಪರಿಣಾಮವಾಗಿರಲಿಲ್ಲ... ನಮ್ಮ ಕುಟುಂಬ ನೇಪಾಳದ ಪ್ರವಾಸ ಹಮ್ಮಿಕೊಂಡು, ಹಿಮಾಲಯದ ರಾಜ್ಯದಲ್ಲಿ ಹೆಸರಿಗೆ ವಿದೇಶವಾಗಿದ್ದರೂ, ಭಾವದಲ್ಲಿ ನಮ್ಮ ದೇಶವೇ ಆಗಿದ್ದ ಈ ನಾಡಿನಲ್ಲಿ ಓಡಾಡಿ ಮೆರೆದಿತ್ತು. ಮಾರನೇ ದಿನ ಭಾರತಕ್ಕೆ ನಮ್ಮ ಮರುಪ್ರವಾಸ. ಅಂದಿನ ಸಂಜೆ "ಯಾಕ್ ಎಂಡ್ ಯೇತಿ" ಹೋಟಲಿನ ರೆಸ್ಟುರಾದಲ್ಲಿ ರಾತ್ರಿ ಭೋಜನಕ್ಕೆ ಕಾದು ಕುಳಿತಿದ್ದೆವು. ಸ್ವಯಂಭುನಾಥ ಬುದ್ಧನ ಮೂರ್ತಿ ಇನ್ನೂ ಕಣ್ಣಿನ ಪಟಲದಿಂದ ಅಳಿಸಿರಲಿಲ್ಲ.

ಬಹುತೇಕ ಭಾರತೀಯ ಪ್ರವಾಸಿಗಳೇ ಕಾಣುತ್ತಿದ್ದರು. ಒಂದೆರಡು ವಿದೇಶೀ ಜೋಡಿಗಳೂ ಬಣ್ಣ ಬಣ್ಣದ ಅಂಗಿಗಳನ್ನು ಹಾಕಿಕೊಂಡು ಪೇಯದ ಗ್ಲಾಸುಗಳಿಗೆ ತುಟಿ ಮುಟ್ಟಿಸಿ ಕುಳಿತುಕೊಂಡಿದ್ದರು. ಮೂಲೆಯಲ್ಲಿ ವೇದಿಕೆಯ ಮೇಲೆ ನೇಪಾಳಿ ಗಾಯಕ ವೃಂದ, ವಿವಿಧ ಹಿಂದೀ ಚಿತ್ರಗಳ ಹಾಡುಗಳನ್ನು ಹಾಡುತ್ತಾ ಜನರನ್ನು ಮನರಂಜಿಸುತ್ತಿದ್ದರು...

ಸುಮಾರು ಗಂಟೆ ಕಳೆದ ನಂತರ ನನಗೂ ರೋಸಿ ಹೋಯಿತು. ಮೊದಲ ಬಾರಿಗೆ "ವಿದೇಶ್" ಪ್ರವಾಸ ಕೈಗೊಂಡಿದ್ದ ನಮಗೆ ಬರೀ ಬಾಲಿವುಡ್ಡಿನ ಹಾಡುಗಳೇ ಕೇಳಿದರೆ ಮೈ ರೋಸಿ ಹೋಗುವುದು ಸಹಜ ತಾನೆ? ಮೇಜಿನಿಂದ ಎದ್ದು ಗಾಯಕರ ಹತ್ತಿರ ಹೋಗಿ "ದಯವಿಟ್ಟು ನಿಮ್ಮ ದೇಶದ ಲೋಕ ಗೀತೆಗಳನ್ನು ಹಾಡಿ" ಎಂದು ಕೋರಿದೆ. ಇಲ್ಲಿಯವರೆಗೂ ಅವರು ಹಾಡಿದ ಮಧುರ ಹಾಡುಗಳಿಗೆ ಚಪ್ಪಾಳೆ ತಟ್ಟಿ ಪ್ರಶಂಸೆ ತೋರಿಸಿದ್ದವರು ನಾವು ಮಾತ್ರ ಎಂದು ಅರಿವಾಗಿದ್ದ ಗಾಯಕ ವೃಂದ ಬಾಯಿ ತುಂಬಾ ಮುಗುಳ್ನಕ್ಕರು... ಸುಶ್ರಾವ್ಯವಾದ ನೇಪಾಳೀ ಲೋಕ ಸಂಗೀತ ಆರಂಭಿಸಿದರು!

ಆಡಂಬರವಿಲ್ಲದ ರಾಗ, ಮಾಧುರ್ಯ ಮುಖ್ಯವಾಗಿದ್ದ ಆ ಹಾಡುಗಳ ಅರ್ಥವೇನೆಂದು ಮುಖ್ಯ ಗಾಯಕ ವಿವರಿಸುತ್ತಿದ್ದ. ಎಲ್ಲ ದೇಶಗಳಲ್ಲೂ ಅದೇ ಭಾವವೇ, ಅದೇ ಮಾಧುರ್ಯವೇ... ಅದೇ ತಳಮಳವೇ... ಅದೇ ಕಳವಳವೇ!

"ಸಸುರಾಲಿ ಸಾಲಿ ಮಾ, ಸಸುರಾಲಿ ಮಾ" ಎಂಬ ಗಾಯನ ಪ್ರಾರಂಭವಾಯಿತು. ತುಂಬಾ ಮಧುರ, ತುಂಬಾ ತಾಳಬದ್ಧ ಗಾನ. ಎಲ್ಲರೂ ತಲೆ ತೂಗಿ ಚಪ್ಪಾಳೆ ಹೊಡೆಯಲು ಪ್ರಾರಂಭಿಸಿದರು. ಗಾಯನ ಮುಗಿಯಿತು.

''ಒನ್ಸ್ ಮೋರ್, ಒನ್ಸ್ ಮೋರ್'' ಎಂದು ಎಲ್ಲರೂ ಕೂಗಿದರು. ಆ ಸುಶ್ರಾವ್ಯ ಗಾನದ ಅರ್ಥವೇನು ಎಂದು ನಾನು ಕೇಳಿದೆ.

ಮುಖ್ಯ ಗಾಯಕ ವಿವರಿಸಿ ಹೇಳಿದ.

ಸುಂದರ ಯುವಕ, ಸುಂದರಿ ಯುವತಿ. ಇಬ್ಬರೂ ಚಹಾದ ತೋಟದಲ್ಲಿ ಕೆಲಸ ಮಾಡುವವರು. ಹಿಮಾಲಯದ ಶ್ರೇಣಿಗಳ ತಪ್ಪಲಿನಲ್ಲಿ ಚಹಾ ಎಲೆಗಳನ್ನು ಆರಿಸುತ್ತಾ ಪ್ರಕೃತಿಯ ಮೈಮರೆಸುವ ನೋಟದಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಪ್ರೇಮಿಸುತ್ತಾರೆ. ಕೆಲವೇ ದಿನಗಳಲ್ಲಿ ಅವರ ಮದುವೆಯಾಗುತ್ತದೆ. ಮದುವೆಯ ಅನಂತರ ಪ್ರಣಯದ ಭರ ಕಡಿಮೆಯಾಗುತ್ತದೆ. ಯುವಕನ ತಾಯಿ ಸೊಸೆಯನ್ನು ಗೋಳಾಡಿಸುತ್ತಾಳೆ. ಒಂದು ದಿನ ಅತ್ತುಕೊಂಡು ಹುಡುಗಿ ವಾಪಸ್ಸು ತವರಿಗೆ ಮರಳುತ್ತಾಳೆ. ಪತ್ನಿಯಿಲ್ಲದ ಮನೆ ನಮ್ಮ ಹುಡುಗನಿಗೆ ನರಕವಾಗಿಬಿಡುತ್ತದೆ... ಅಳಿಯನ ಅಭಿಮಾನ ತೊರೆದು ಅತ್ತೆಯ ಮನೆಗೆ ಬರುತ್ತಾನೆ.... ತನ್ನ ಪತ್ನಿಯನ್ನು ವಾಪಸು ಕಳಿಸೆಂದು ಅತ್ತೆಯನ್ನು ಗೋಗರೆಯುತ್ತಾನೆ... ಊಂ... ಹೂಂ... ಅತ್ತೆಯ ಮನ ಕರಗುವುದಿಲ್ಲ ''ನನ್ನ ಮುದ್ದು ಮಗಳನ್ನು ನೀವೆಲ್ಲಾ ದುಃಖಪಡಿಸಿದ್ದೀರಿ... ನಿನ್ನ ತಾಯಿ ನನ್ನ ಮಗಳ ಹೊಟ್ಟೆ ಉರಿಸಿದ್ದಾಳೆ... ನೀನು ಪತ್ನಿಯನ್ನು ಗೋಳಿಡಿಸಿದ್ದೀಯಾ... ನನ್ನ ಮಗಳು ಇನ್ನು ಮೇಲೆ ಇಲ್ಲೇ ಇರುತ್ತಾಳೆ...'' ಎಂದು ಆಕ್ಷೇಪಿಸುತ್ತಾಳೆ.

''ಸುಸುರಿಮಾ''ಳನ್ನು (ಎಂದರೆ ಅತ್ತೆ) ನಾನಾ ತರಹ ಒಪ್ಪಿಸಲು ಹುಡುಗ ಪ್ರಯತ್ನಿಸುತ್ತಾನೆ. ಏನೂ ಪ್ರಯೋಜನವಿಲ್ಲ... ಕಡೆಗೆ ಹುಡುಗಿಯ ತಂಗಿ, ತನ್ನ ನಾದಿನಿ ''ಸಾಲಿ ಮಾ''ಳನ್ನು ಪೀಡಿಸುತ್ತಾನೆ... ''ನಿನ್ನ ಅಕ್ಕ ಮುನಿಸಿಕೊಂಡಿದ್ದಾಳೆ... ನೀನಾದರೂ ಅವಳಿಗೆ ತಿಳಿಸಿ ಹೇಳು... ಅವಳಿಲ್ಲದೆ ನನ್ನ ಜೀವನವಿಲ್ಲ... ಅವಳನ್ನು ನಾನು ಹಿಮಾಲಯದ ಬೆಟ್ಟಗಳಷ್ಟು ಪ್ರೀತಿಸುತ್ತೇನೆ... ಒಂದೇ ಬಾರಿ ಅವಳನ್ನು ನನ್ನ ಹತ್ತಿರ ಕಳಿಸಿ'' ಎಂದು ದುಂಬಾಲು ಬೀಳುತ್ತಾನೆ. ಇಲ್ಲ... ಏನೂ ಪ್ರಯೋಜನವಿಲ್ಲ... ''ನನ್ನ ಕೋಮಲ ಬಾಲಕಿಯನ್ನು ನೀನು ನೋಯಿಸಿದ್ದೀಯಾ... ನಿನ್ನ ತಾಯಿ ನನ್ನ ಮಗುವನ್ನು ಗೋಳಾಡಿಸಿದ್ದಾಳೆ... ಖಂಡಿತ ನನ್ನ ಮಗಳನ್ನು ನಿನ್ನ ಹತ್ತಿರ ಕಳಿಸುವುದಿಲ್ಲ'' ಎಂದು ಅತ್ತೆ ನಿಷ್ಠೂರವಾಗುತ್ತಾಳೆ.

ಇತ್ತ ಹುಡುಗನ ದುಃಖ ಪ್ರಲಾಪ, ಅತ್ತ ಸಸುರಿಮಾಳ ನಿಷ್ಠೂರ... ಹಾವು ಸಾಯುವುದಿಲ್ಲ... ಕೋಲೂ ಮುರಿಯುವುದಿಲ್ಲವೆಂಬ ಸಮಸ್ಯೆ...

ನಮ್ಮ ನಾಯಕ ಏನು ತಾನೇ ಮಾಡಬಲ್ಲ? ಸರಿ, ಪ್ರೇಮಿಗಳನ್ನು ದೇವರೂ ಕೂಡಾ ಬೇರ್ಪಡಿಸುವುದಿಲ್ಲ ಎಂಬ ಸತ್ಯದಂತೆ ''ಕಾಂಚಿ ಸಾಲಿ ಮಾ'' ಎಂದರೆ ಸುಂದರಿ ನಾದಿನಿ ಅಕ್ಕನ ಹತ್ತಿರ ಹೋಗಿ ಭಾವನ ಪರ ವಾದಿಸುತ್ತಾಳೆ.

''ಭಾವ ತುಂಬಾ ಬಡವಾಗಿ ಹೋಗಿದ್ದಾನೆ, ನಿನ್ನ ವಿರಹದಲ್ಲಿ'' ಎಂದು ಭಾವವಾಗಿಯೇ ಬುದ್ಧಿ ಹೇಳುತ್ತಾಳೆ ತಂಗಿ. ನಮ್ಮ ನಾಯಕಿಯ ನಿಷ್ಠೂರ ಮನ ಸ್ವಲ್ಪ ಸ್ವಲ್ಪವಾಗಿ ಕರಗುತ್ತದೆ. ಪ್ರೀತಿಯ ಪತಿಯ ಪ್ರೇಮದ ನೋಟ, ಅವನ ತುಂಟ ನಗು ಅವಳಿಗೆ ನೆನಪು ಬಂದು ಮನ ಸ್ವಲ್ಪ ಸ್ವಲ್ಪವಾಗಿ ಮಾರ್ಪಾಡಾಗುತ್ತದೆ.

''ಮಾ, ಪತಿಯ ಮನೆಯೇ ಹೆಣ್ಣಿನದು, ತವರು ಶಾಶ್ವತವಲ್ಲ ಎಂದು ನೀನೇ ಹೇಳುತ್ತಿದ್ದೀ ತಾನೆ... ನಾನೂ ತಪ್ಪು ಮಾಡಿದೆ. ನನ್ನ ಗಂಡ ಒಳ್ಳೆಯವನೇ'' ಎಂದು ವಾದಿಸುತ್ತಾಳೆ.

ಅತ್ತ ವಿರಹ ವೇದನೆ ತಾಳದೆ ನಮ್ಮ ನಾಯಕ ಅತ್ತೆಯ ಕಾಲಿಗೆ ಬಿದ್ದು ''ಸಸುರಿ ಮಾ, ನನ್ನನ್ನು ಕ್ಷಮಿಸು, ನಿನ್ನ ಮಗಳನ್ನು ಇನ್ನು ಮುಂದೆ ರಾಣಿಯ ತರಹ ನೋಡಿಕೊಳ್ಳುವೆ'' ಎಂದು ಆಶ್ವಾಸನೆ ಕೊಡುತ್ತಾನೆ.

''ಸಸುರಿ ಮಾ'' ಹಾಗೂ ''ಕಾಂಚಿ ಸಾಲಿ ಮಾ'' ನೋಡುತ್ತಿದ್ದಂತೆ ಇಬ್ಬರು ಪ್ರೇಮಿಗಳು ತಮ್ಮ ಮನೆಗೆ ಹೊರಡುತ್ತಾರೆ... ಮುಂದೆ ಅವರಿಬ್ಬರೂ ಶಾಶ್ವತವಾಗಿ ಸುಖವಾಗಿರುತ್ತಾರೆ!!

ಹಾಡು ಮತ್ತೆ ಪ್ರಾರಂಭವಾಯಿತು. ಎಲ್ಲರೂ ಮೈಮರೆತು ತಲೆದೂಗುತ್ತಾ ತಾಳವಾಗಿ ಚಪ್ಪಾಳೆ ತಟ್ಟಿದರು... ಹಾಡು ಮುಗಿಯಿತು. ನಮ್ಮದೇ ಭಾರತ ವಾಸಿ ಯುವಕನೊಬ್ಬ ಕುಡಿಯುತ್ತಿದ್ದ ಶಾಂಪೇನಿನ ಗ್ಲಾಸನ್ನು ಕೈಯಲ್ಲಿ ಹಿಡಿದು ವೇದಿಕೆಯ ಮೇಲೆ ಹತ್ತಿದ. ''ಮಹನೀಯರೇ ಮತ್ತು ಮಹಿಳೆಯರೇ... ನನ್ನ ಹೆಸರು ಸುಂದರ ರಾಮಕೃಷ್ಣನ್, ಶಿವ ಸುಬ್ರಹ್ಮಣ್ಯಂ ನನ್ನ ಕಂಪನಿಯ ''ಆಫ್ ಸೈಟ್'' ಮೂಲಕ ಇಲ್ಲಿ ಬಂದಿದ್ದೇನೆ. ಈ ಗಾಯಕರು ಹಾಡಿದ್ದು ನನ್ನ ಹಾಡನ್ನೇ....ನನ್ನ ಪತ್ನಿ ರಾಧಿಕಾ ಇಲ್ಲೇ ಇದ್ದಾಳೆ... ನಾವಿಬ್ಬರೂ ಬೇರ್ಪಟ್ಟು ಒಂದು ವರ್ಷವಾಗಿತ್ತು.... ಈ ಒಂದು ವರ್ಷ ನೂರು ಯುಗಗಳಷ್ಟು! ನನ್ನ ಪತ್ನಿಯು ಪಂಜಾಬಿನವಳು. ನಾನು ತಮಿಳುನಾಡಿನವನು... ನಮ್ಮಿಬ್ಬರ ಪ್ರೇಮ ನಾವು ಒಟ್ಟಿಗೆ ಕೆಲಸ ಮಾಡುತ್ತಿದ್ದ ಸಾಫ್ಟ್‌ವೇರ್ ಕಂಪೆನಿಯಲ್ಲಿ ಪ್ರಾರಂಭವಾಯಿತು... ಮದ್ರಾಸಿ ಹುಡುಗ ಬೇಡವೆಂದು ರಾಧಿಕಾಳ ತಾಯಿ ತಂದೆಯರು ಮದುವೆ ವಿರೋಧಿಸಿದರು. ಪಂಜಾಬಿ ಹುಡುಗಿ ನಮ್ಮ ಮನೆಗೆ ಬೇಡವೆಂದು ನನ್ನ ತಾಯಿ ತಂದೆ ವಿರೋಧಿಸಿದರು....''

ಹುಡುಗ ಇನ್ನೆರಡು ಗುಟುಕು ಹೀರಿದ. ಒಂದೆರಡು ಸಲ ನಿಡುಸುಯ್ದು ವೇಯ್ಟರ್‌ನನ್ನು ಕರೆದು ಶಾಂಪೇನಿನ ಗ್ಲಾಸನ್ನು ತುಂಬಿಸಿಕೊಂಡ.

''ನಾವಿಬ್ಬರೂ ಒಬ್ಬರನ್ನೊಬ್ಬರು ತುಂಬಾ ಪ್ರೀತಿಸುತ್ತಿದ್ದೆವು. ಯಾರ ವಿರೋಧಕ್ಕೂ ಹೆದರದೆ, ಕೋರ್ಟಿನಲ್ಲಿ ವಿವಾಹವಾದೆವು. ನಮ್ಮದು ಸುಂದರ ಸಂಸಾರ. ಮೊದಲೆರಡು ತಿಂಗಳು ಸುಂದರವಾಗಿಯೇ ಕಳೆದವು... ಅಲ್ಲಿಯವರೆಗೆ ಬರೀ ಮ್ಯಾಕ್‌ಡೋನಲ್ಡ್‌ನ ಬರ್ಗರ್, ಪಿಟ್ಜಾ ಹಟ್ಟಿನ ಪಿಟ್ಜಾ, ಇಟಲಿಯ ಪಾಸ್ಟಾ ತಿಂದೇ ಬದುಕುತ್ತಿದ್ದೆವು.

ರಾಧಿಕಾಳ ತಾಯಿ ತಂದೆ ಶಾಂತಿ ಕೋರಿ ನಮ್ಮ ಮನೆಗೆ ಬಂದರು. ತಂದೆ ಹೋದರೂ ತಾಯಿ ಇಲ್ಲೇ ಉಳಿದರು. ಪ್ರತಿದಿನ ಪಂಜಾಬಿ ಅಡುಗೆ ಮಾಡಿ ಬಡಿಸಿದರು. ಅವರು ಹೋದ ನಂತರ ನನ್ನ ತಾಯಿ-ತಂದೆ ಬಂದರು. ರಸಂ, ಸಾಂಬಾರು, ಪೊಂಗಲ್, ಇಡ್ಲಿ ಮಾಡಿ ರುಚಿ ರುಚಿಯಾಗಿ ಬಡಿಸಿದರು. ಹೋಗುವ ಮುನ್ನ ಭರಣಿಯ ತುಂಬಾ ಮೊಳಗಾಯಿ ಪುಡಿ ತುಂಬಿಸಿಟ್ಟರು. ಮುಂದಿನ ಸಲ ಬಂದದ್ದು ರಾಧಿಕಾಳ ತಾಯಿ. ಭರಣಿಯಲ್ಲಿದ್ದ ಮೊಳಗಾಯಿ ಪುಡಿ ಬಿಸಾಕಿ, ಮಾವಿನ ಕಾಯಿಯ ಸಿಹಿ ಚಟ್ನಿ ತುಂಬಿಸಿಟ್ಟರು. ಪ್ರತಿದಿನ ರಾಜಮಾ, ಪನೀರ್ ಎಂದು ಅಡಿಗೆ ಮಾಡಿ ಬಡಿಸಿದರು. ನನಗೂ ಸಾಕಾಗಿ ನಮ್ಮ ತಾಯಿ ಕಳಿಸಿದ ತೊಕ್ಕು, ಮೊಳಗಾಯಿ ಪುಡಿ ಎಲ್ಲಿ ಎಂದು ಕೇಳಿದೆ. ಆವಳ ತಾಯಿ ಖಾರವಾಗಿಯೇ ''ಅದೊಂದು ತಿನ್ನುವ ವಸ್ತು ಅಲ್ಲ... ಪುತ್ತರ್'' ಎಂದರು.

ಅದೇ ಕಾರಣ ನೋಡಿ. ರಾಧಿಕಾಳ ತಾಯಿ ಪ್ರತಿದಿನ ಮದ್ರಾಸಿ ಮದ್ರಾಸಿ ಎಂದು ಮೂದಲಿಸತೊಡಗಿದರು. ನಾನೂ ಕೂಗಾಡತೊಡಗಿದೆ. ನನ್ನ ತಾಯಿಯ ಹತ್ತಿರ ಅತ್ತುಕೊಂಡಾಗ "ಪಂಜಾಬಿಗಳೇ ಹಾಗೆ. ನಿನಗೆ ಒಳ್ಳೆಯ ತಮಿಳು ಹುಡುಗಿಯರು ಕಡಿಮೆಯಾಗಿದ್ದರೆ?" ಎಂದು ಒಗ್ಗರಣೆ ಹಾಕಿದರು.

ಅನಂತರ ನಾವು ಬೇರ್ಪಟ್ಟೆವು. ಇಂದಿಗೆ ಸರಿಯಾಗಿ ವರ್ಷವಾಯಿತು. ನನ್ನ ಪತ್ನಿಯನ್ನು ನಾನು ತುಂಬಾ ಪ್ರೀತಿಸುತ್ತೇನೆ. ರಾಧಿಕಾ.... ಪ್ಲೀಸ್.... ಕಮ್.... ಬ್ಯಾಕ್... ನನ್ನನ್ನು ಕ್ಷಮಿಸು" ಎಂದು ಮಂಡಿಯ ಮೇಲೆ ಕುಳಿತು ಜೋರಾಗಿ ಕಣ್ಣೀರು ಸುರಿಸಿದ.

ರೆಸ್ಟುರಾದ ಆ ಮೂಲೆಯಿಂದ ದೃಶ್ಯ ಪ್ರಾರಂಭವಾಯಿತು. ಸುಂದರ ಪಂಜಾಬಿ ಹುಡುಗಿ ರಾಧಿಕಾ "ಸುಂದರ್" ಎನ್ನುತ್ತಾ ವೇದಿಕೆ ಹತ್ತಿ ಅವನನ್ನು ಅಪ್ಪಿಕೊಂಡು ಕಣ್ಣೀರು ಸುರಿಸಿದಳು. ಎಲ್ಲರೂ ಕಣ್ಣೊರೆಸಿಕೊಂಡು, ಚಪ್ಪಾಳೆ ತಟ್ಟಿದರು. ಸುಂದರ್ ಮತ್ತು ರಾಧಿಕಾ ತಮ್ಮದೇ ಜಗತ್ತಿನಲ್ಲಿ ತನ್ಮಯರಾಗಿದ್ದರು....

ಅಂತೂ ನೇಪಾಳದಲ್ಲಿ ಕಳೆದ ಕಡೆಯ ಸಂಜೆ ಥೇಟ್ ಬಾಲಿವುಡ್ಡಿನ ಕಥೆಯ ಮಾದರಿ ಮುಕ್ತಾಯವಾಯಿತು. ನಮ್ಮ ನೇಪಾಳೀ ಗಾಯಕರಿಗೆ ಯಥೇಚ್ಛವಾಗಿ ಪ್ರಶಂಸೆ ಮತ್ತು ಹಣ ದೊರಕಿತು.

"ನೋಡಮ್ಮಾ... ನಮಗೂ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಯಾರ ಮನವನ್ನೂ ನೋಯಿಸಬಾರದು" ಎಂದು ಯಜಮಾನರೂ ನನಗೆ ಅಗತ್ಯವಿಲ್ಲದ ಬುದ್ಧಿ ಹೇಳಿದರು. "ಎಲಾ ಮಾನವ ನನ್ನನ್ನೇ ಸಸುರಿ ಮಾ ಮಾಡಿದರಲ್ಲ" ಎಂದುಕೊಂಡೇ ಹೊರಗೆ ಬಂದೆ!



**ಹಳೆ ಹೈದರಾಬಾದಿ ಜೋಕ್ ಪ್ರಕಾರ ಒಬ್ಬ ಹೈದರಾಬಾದಿ ಎಂದರೆ ಆಟೋವಾಲಾ; ಇಬ್ಬರು ಎಂದರೆ ಇರಾನಿ ಹೋಟೆಲಿನಲ್ಲಿ ಒಂದು ಕಪ್ ಚಾಯ್; ಮೂವರು ಎಂದರೆ ನ್ಯೂ ಜೆರ್ಸಿಯಲ್ಲಿ ಸಾಫ್ಟ್‌ವೇರ್ ಉದ್ಯಮ; ನಾಲ್ವರು ಎಂದರೆ ಒಂದು ಔಷಧಿ ಕಂಪನಿ.**

**ಈಗ ಇದಕ್ಕೆ ಒಂದು ಸೇರ್ಪಡೆ: ಐವರು ಹೈದರಾಬಾದಿಗಳು ಎಂದರೆ ಚಿರಂಜೀವಿ ಫ್ಯಾನ್ ಕ್ಲಬ್.**

# ತುಂತುರು

- ರಾಜಕೀಯ ಎಂದರೆ ಬ್ರೀಫ್‌ಕೇಸು, ಸೂಟ್‌ಕೇಸು, ಕ್ರಿಮಿನಲ್‌ಕೇಸು ಎಲ್ಲಾ ಮಾಮೂಲಿ ತಾನೆ.....
- I don't need to be wanted, I want to be needed..
- ಒಂದು ಸಿನಿಮಾ ಹಿಟ್ ಆದರೆ ನಿರ್ದೇಶಕನಿಗೆ ಒಂದು ಕೋಟಿ; ನಾಯಕನಿಗೆ ಎರಡು ಕೋಟಿ; ಕೊನೆಗೆ ನಿರ್ಮಾಪಕನಿಗೆ ಮಠವೇ ಗತಿ...
- My inferiority complex is not as good as yours.
- ನಿನ್ನಂಥ ಮಿಲಿಯಾಧೀಶ ಎಕಾನಮಿ ಕ್ಲಾಸ್‌ನಲ್ಲಿ ಹೋಗೋದಾ?
  ಹಾಗಾಗಿಯೇ ನಾನು ಮಿಲಿಯಾಧೀಶ.
- Your clothes should not be louder than your wife.
- ಸಣ್ಣದಾಗಿ ಗುರುಗುಟ್ಟುವುದೇ ಸಾಕಾದಾಗ ಕಚ್ಚಲು ಏಕೆ ಹೋಗಬೇಕು?
- Today's youth do not want to be well informed but well formed.
- 'ಸಾಸ್ ಭಿ ಕಭೀ ಟೊಮಾಟೊ ಥೀ!' ಎಂಬ ಚಿತ್ರ ಕಿಸಾನ್ ಸಂಸ್ಥೆ ತಯಾರಿಸಲಿದೆ ಎಂಬುದು ಶುದ್ಧ ಕುಹಕ.
- 'ಬಾಸ್ ಕಭೀ ಇಂಟರ್ನ್ ಥಾ' ಚಿತ್ರ ಯಾರು ತಯಾರಿಸಲಿದ್ದಾರೆ?
- India may be on the road to progress but its roads are not progressing.
- I don't believe in God but I miss Him.
- ಪರಿಸರ ವಿಜ್ಞಾನ ಓದೋ ಹುಡುಗ/ಗಿ 80 ಪರ್ಸೆಂಟ್ ಮಾರ್ಕ್ಸ್ ತೆಗೀತಾನೆ/ಳೆ. ಮನೆ ಮುಂದಿನ ಗಿಡಕ್ಕೆ ನೀರು ಹಾಕೊಲ್ಲ.
- 500 ಮೀಟರ್ ಸ್ವಿಮ್ ಮಾಡೋದನ್ನ ಕಲಿತರೆ ನೂರು ಮೀಟರ್ ಈಜೋದು ಸುಲಭ.
- ಒಮ್ಮೊಮ್ಮೆ ಪ್ರಾರ್ಥನೆ ಮಾಡದೇ ಇದ್ದಾಗಲೂ ನಿನ್ನ ನೆನಪಾಗುತ್ತೆ ದೇವರೆ...
- ಕೌನ್ ಬನೇಗಾ ಎಂಎಲ್‌ಎ?
  ಕ್ರೋರ್‌ಪತಿ
- ಇತರರ ಚೌಕಟ್ಟಿನೊಳಗೆ ನಮ್ಮ ಚಿತ್ರ ತೂರಿಸುವುದೇ?

**- ದಂನಅ**

# ಆಮಂತ್ರಣ

**- ಅಣ್ಣಾಸ್ವಾಮಿ ಮೊದಲಿಯಾರ್**

ರಾತ್ರಿ ಕಗ್ಗತ್ತಲೆ - ಕಪ್ಪನೆಯ ಭೂತ ಎದುರಿಗೆ ಬಂದರೂ ಕಣ್ಣಿಗೆ ಕಾಣದಂಥಹ ದಟ್ಟವಾದ ಕಾರ್ಗತ್ತಲು. ರೊಯ್ಯನೆ ಬೀಸುವ ಚಳಿಗಾಳಿ. ರಪರಪನೆ ರಾಚುವಂತ ಮಳೆ. ವಿದ್ಯುತ್‌ಚ್ಛಕ್ತಿ ಕಡಿತದಿಂದ ನಗರ ಕರಿಕಂಬಳಿ ಹೊದ್ದುಕೊಂಡು ಮಲಗಿದಂತೆ, ನಿಶಾರಾಜ್ಯ ವಿಜಯೋತ್ಸವ ಆಚರಿಸುತ್ತಿತ್ತು.

ಚಳಿಗೆ ಗಡಗಡನೆ ನಡುಗಿದೆ. ಅರ್ಧತೋಳಿನ ಸ್ವೆಟರ್, ಅದರ ಮೇಲೆ ತುಂಬು ತೋಳಿನ ಸ್ವೆಟರ್, ತಲೆಗೆ ಉಲ್ಲನ್ ಟೋಪಿ ಅದರ ಮೇಲೆ ಮಫ್ಲರ್ ಹಾಕಿಕೊಂಡು, ಬಿಸಿಬಿಸಿ ಬ್ಲ್ಯಾಕ್‌ಡಿಕಾಕ್ಷನ್ ಕಾಫಿ ಕುಡಿದು, ಗ್ವಾಲಿಯರ್‌ಗೆ ಹೋಗಿದ್ದಾಗ ತಂದಿದ್ದ ವುಲ್ಲನ್‌ರಗ್ ಹೊದ್ದುಕೊಂಡು ಬೆಚ್ಚಗೆ ಮಲಗಿದೆ. ತಕ್ಷಣ ನಿದ್ದೆ ಬರಲಿಲ್ಲ. ಕರೆಂಟ್‌ಕಟ್ ಮಾಡಿದವರನ್ನು ಶಪಿಸಿದೆ. ಇಲ್ಲದಿದ್ದರೆ ನಿದ್ರೆ ಬರುವವರೆಗೆ 'ಪರ್ವ' ಕಾದಂಬರಿ ಓದಬಹುದಾಗಿತ್ತು. ಇಪ್ಪತ್ತೆರಡು ಸಾವಿರ ಖರ್ಚುಮಾಡಿ ಹಾಕಿಸಿದ್ದ ಯು.ಪಿ.ಎಸ್ ಕೈ ಕೊಟ್ಟಿತ್ತು. ಬ್ಯಾಟರಿಗಳು ಡಿಸ್‌ಚಾರ್ಜ್ ಆಗಿದ್ದವು. ಇದೇನು ನಗರದ ಬಾಳಿನ ಗೋಳು?! ಸೋಲಾರ್ ಸಿಸ್ಟಂ ಲಾಂದ್ರ ಮಂಕಾಗಿ ಉರಿಯುತ್ತಿತ್ತು. ಮೂರು ದಿನದಿಂದ ಸರಿಯಾಗಿ ಬಿಸಿಲಿಲ್ಲದೆ ಮೋಡ ಕವಿದಿದ್ದರಿಂದ ಅದೂ ಸರಿಯಾಗಿ ಚಾರ್ಜ್ ಆಗಿರಲಿಲ್ಲ. ಇದೇನು ಬೆಂಗಳೂರಿಗೆ ಈಗತಿ ಬಂತು?! ಎಂದು ಯೋಚನೆ ಮಾಡಿದೆ. ಪರಕೀಯರ ಆಕ್ರಮಣ, ಅತಿಯಾಗಿತ್ತು. ಮಿನಿಭಾರತದಂತೆ, ದೇಶದ ಎಲ್ಲಾ ಭಾಷೆ ಜನ ಬೆಂಗಳೂರಿಗೆ ಬಂದು ನೆಲಸಿ, 'ಟೆಂಟಿನೊಳಗೆ ಆಶ್ರಯ ಪಡೆದ ಒಂಟೆ'ಯಂತೆ ಕನ್ನಡಿಗರಿಗೆ ಇರಲು ಸ್ಥಳವಿಲ್ಲದಂತಹ ವಾತಾವರಣ ಸೃಷ್ಟಿಯಾಗಿದೆ. ಇನ್ನು ಈ ವಾತಾವರಣವೂ ಹಾಗೇ ಆಗಿದೆ, ಮದ್ರಾಸಿನಲ್ಲಿ ಚಂಡಮಾರುತ ಬಂದರೆ ಇಲ್ಲಿ ಮಳೆ, ವಿಶಾಖ ಪಟ್ಟಣದಲ್ಲಿ ಸೈಕ್ಲೋನ್ ಬಂದರೆ ಬೆಂಗಳೂರಿನಲ್ಲಿ ಮಳೆ, ಕೇರಳದಲ್ಲಿ ಚಂಡಮಾರುತ ಬೀಸಿದರೆ ಬೆಂಗಳೂರಿನಲ್ಲಿ ಮಳೆ ಇದ್ಯಾವ ನ್ಯಾಯ ಸ್ವಾಮಿ? ನೀವೇ ಹೇಳಿ!

'ಟ್ರಿನ್.. ಟ್ರಿನ್.. ಟ್ರಿನ್...' ಟೆಲಿಫೋನ್ ಗಂಟೆ ಬಾರಿಸಿತು. ಗಡಿಯಾರ ನೋಡಿದೆ ರಾತ್ರಿ ಹನ್ನೊಂದೂವರೆ! ಇಷ್ಟು ಹೊತ್ತಿನಲ್ಲಿ ಯಾರಪ್ಪಾ ಅದು?! ಎಂದು ಗೊಣಗುತ್ತಲೇ ಟೆಲಿಫೋನ್ ಎತ್ತಿಕೊಂಡೆ. "ಹಲೋ!" ಎಂದೆ ಚಳಿಗೆ ನಡುಗುವ ಧ್ವನಿಯಲ್ಲಿ.

"ಹಲೋ! ಯಾರು ಮಾತನಾಡೋದು ಸುನಿಲ್ ಇದ್ದಾರಾ?" ಗಡುಸಾದ ಧ್ವನಿ ಕೇಳಿಸಿತು.

''ಸುನಿಲ್ ಮಾತಾಡ್ತಿರೋದು ನೀವು ಯಾರು?'' ಎಂದೆ.

''ಅಯ್ಯೋ ನೀನೇನಯ್ಯ ನಾನು ನಡುಗುವ ಧ್ವನಿ ಕೇಳಿ ನಿನ್ನ ತಾತ ಇರಬಹುದು ಅನ್ಕೊಂಡೆ ಅವ್ಯಾಕೆ ನಡುಗ್ತಿದ್ದೀಯ?'' ಎಂದ ವಿವೇಕ / ದೂರದ ನಂಟ.

''ಅದಿರ್ಲಿ, ಏನು ಫೋನ್ ಮಾಡಿದ್ದು?''

''ಬರುವ ಭಾನುವಾರ ನನ್ನ ಮಗನ ಮದುವೆ. ಬೆಂಗಳೂರಿನ ಜಯನಗರದ ಜೆ ಅಂಡ್ ಬಿ ಛತ್ರದಲ್ಲಿ, ತಪ್ಪದೆ ಮನೆಯವರನ್ನೆಲ್ಲಾ ಕರ್ಕೊಂಡು ಬಂದ್ಬಿಡು. ಆಮಂತ್ರಣ ಪತ್ರ ಪೋಸ್ಟ್‌ನಲ್ಲಿ ಬರುತ್ತೆ. ಸರೀನಾ, ಮರೀಬೇಡ!'' ಫೋನ್ ಕಟ್ ಆಯಿತು.

ರಾತ್ರಿ ಈ ವೇಳೆಯಲ್ಲಿ ಮಗನ ಮದುವೆ ಆಮಂತ್ರಣ ನೀಡುವ ರೀತಿಯೇ ಇದು! ಎಂಥಹ ಕಾಲ ಬಂತಪ್ಪಾ! ಎಂದು ಗೊಣಗಿದೆ.

ನನ್ನ ಮಗಳ ಮದುವೆಗೆ ಮನೆಮನೆಗೆ ಹೋಗಿ ಆಮಂತ್ರಣ ಪತ್ರ ಕೊಟ್ಟು ನೆಂಟರು, ಸ್ನೇಹಿತರನ್ನು ಆಹ್ವಾನಿಸಿದ್ದೆ. ಇವನ ಮನೆಗೆ ಹೋದಾಗ ಮನೆ ಬೀಗಹಾಕಿತ್ತು. ಪಕ್ಕದ ಮನೆಯವರ ಬಳಿ ಕೊಟ್ಟು ಬಂದಿದ್ದೆ. ''ಯಾರ್‍ಯಾರ ಮನೇಗೋ ಆಮಂತ್ರಣಪತ್ರ ಕೊಟ್ಟರೆ ಯಾರು ಮದುವೆಗೆ ಹೋಗ್ತಾರೆ?'' ಅಂದನಂತೆ. ನನಗೆ ಗೊತ್ತಾಯ್ತು. ಅವನಿರುವುದು ಇಂದಿರಾನಗರ, ನಾನಿರುವುದು ವಿಜಯನಗರ, ಆದರೂ ಇನ್ನೊಂದು ಸಲ ಅವರ ಮನೆಗೆ ಹೋಗಿ ಭೇಟಿಯಾಗಿ ಮದುವೆಗೆ ಕರೆದು ಬಂದಿದ್ದೆ. ಇಷ್ಟಾದರೂ ಅವನು ನನ್ನ ಮಗಳ ಮದುವೆಗೆ ಬರಲಿಲ್ಲ. ಈಗ ಅವನು ಅರ್ಧರಾತ್ರೀಲಿ ಫೋನಿನಲ್ಲಿ ಅವನ ಮಗನ ಮದುವೆಗೆ ಕರೆದ ಎಂದು ಹೋಗ್ಬೇಕಾ? "To go or not to go" ಎನ್ನುವ ಮನೋಸ್ಥಿತಿ ಉಂಟಾಯಿತು.

ಸ್ನೇಹ-ಬಾಂಧವ್ಯ ಯಾವ ಮಟ್ಟಕ್ಕೆ ಯಾಂತ್ರಿಕವಾಗುತ್ತಿದೆ ಎನಿಸಿತು. ನನ್ನ ತಾತನ ಕಾಲದಲ್ಲಿ 'ಮದುವೆ' ಅಂದರೆ ಊರಿಗೇ ಸಂಭ್ರಮ. ಯಾರೊಬ್ಬರ ಮನೆಯಲ್ಲಿ ಮದುವೆಯಾದರೂ, ಊರಿನ ಜನರೆಲ್ಲ ಸೇರಿ ಸಂಭ್ರಮ ಸಡಗರದಿಂದ ಆಚರಿಸುತ್ತಿದ್ದರಂತೆ. ಹಸಿರುತೋರಣ, ಚಪ್ಪರ ಹಾಕುವುದು, ಬೀದಿಬೀದಿ ಅಲಂಕಾರ ಮಾಡುವುದು, ಅಡಿಗೆ ಮಾಡುವುದು ಬಡಿಸುವುದು, ಹೀಗೆ ಎಲ್ಲಾ ಕೆಲಸ ತಾವೇ ಮುಂದಾಗಿ ಬಂದು ಊರಿನ ಜನ ಮಾಡ್ತಿದ್ದರಂತೆ. ಆಹ್ವಾನ ಪತ್ರಿಕೆ ಕೊಡಬೇಕಾದರೆ ನಾಗಸ್ವರ ಸಮೇತ ಸಪರಿವಾರದೊಂದಿಗೆ ಎಲ್ಲರ ಮನೆಗೂ ಹೋಗಿ ಕರೆಯುತ್ತಿದ್ದರಂತೆ. ಆ ಅನುಬಂಧ ಈಗೆಲ್ಲಿ ಹೋಯಿತು?

ಕ್ರಮೇಣ ನಾಗಸ್ವರ, ಪರಿವಾರ ನಿಂತುಹೋದರೂ, ಮದುವೆ ಮನೆಯವರು ಮನೆಗೆ ಬಂದು ಒತ್ತಾಯ ಪೂರ್ವಕವಾಗಿ ಆಹ್ವಾನಿಸಿ, ಆಹ್ವಾನ ಪತ್ರ ನೀಡುತ್ತಿದ್ದರು. ಹಳದಿ-ಕೆಂಪು ಬಣ್ಣದ ಪೇಪರಿನಲ್ಲಿ ಪಂಚಾಂಗದಂತೆ ನಕ್ಷತ್ರ, ತಿಥಿ, ಸಂವತ್ಸರ ಮೊದಲಾದ ವಿವರಗಳನ್ನು ತಿಳಿಸಿ, ಪ್ರವರದಂತೆ ತಾತನ ಹೆಸರು, ತಂದೆ ಹೆಸರು, ವರನ ಹೆಸರು, ಹೀಗೆ ವಿವರಗಳಿರುವ ಆಹ್ವಾನ ಪತ್ರ ವಾಡಿಕೆಯಲ್ಲಿತ್ತು.

ಆಧುನಿಕತೆ ಆವರಿಸಿದಂತೆ, ಬೆಲೆಬಾಳುವ ಕರೆಯೋಲೆಗಳಲ್ಲಿ ತಂದೆ ಹೆಸರು, ವಿವಾಹವಾಗುವವರ ಹೆಸರು ಅಚ್ಚುಹಾಕಿ ಕರೆಯುತ್ತಿದ್ದರು. ತಾತನೂ ಇಲ್ಲ - ತಂದೆ ಹೆಸರೂ ಇಲ್ಲ. ಮದುವೆಯಾಗುವವರು ತಾವೇ ''ನನ್ನ ಮದುವೆಗೆ ಬನ್ನಿ!'' ಎನ್ನುವಂತಾಯಿತು.

ಈಗ ಫೋನಿನಲ್ಲೇ ಕರೆಬರತೊಡಗಿದೆ. ಜಗತ್ತು ವೇಗವಾಗಿ ಸುತ್ತಲಾರಂಭಿಸಿರಬಹುದೇ?! ಯಾರಿಗೂ ಬಿಡುವಿಲ್ಲ. ಗಡಿಬಿಡಿ ಜೀವನ, ಬೆಳಿಗ್ಗೆ ಮಕ್ಕಳಿಗೆ ಶಾಲೆಗೆ ಹೋಗುವ ಧಾವಂತ, ದೊಡ್ಡವರಿಗೆ ಕೆಲಸಕ್ಕೆ ಹೋಗುವ ಧಾವಂತ, ಮುದುಕರಿಗೆ ವಾಕಿಂಗ್, ಲಾಫಿಂಗ್ ಕ್ಲಬ್, ದೇವಸ್ಥಾನಕ್ಕೆ ಭೇಟಿ, ಹೀಗೆ ಹಲವಾರು ಕಾರ್ಯಕ್ರಮಗಳು. ಯಾರಿಗೆ ಬಿಡುವಿದೆ?

ಮದುವೆ ಒಂದು ಕಲಾಚಾರ, ಸುಸಂಸ್ಕೃತಿಯಾಗಿತ್ತು. ಅದರಲ್ಲಿ ಜೀವನದ ಸತ್ವವೇ ಅಡಗಿತ್ತು. ಈಗ ಪದ್ಧತಿ ಬಿಡಲಾಗದೆ ಮಾಡುವ ಸಂಪ್ರದಾಯ. ಪುರೋಹಿತರು ಅಷ್ಟೇ. ಜನನೋಡಿ ಶಾಸ್ತ್ರ ನಡೆಸುವಂತೆ ಕಾಣತ್ತೆ. ಬೇಕಿಲ್ಲದವರಿಗೆ ಯಾಕೆ ಮಂತ್ರ ಘೋಷವೆಂದು ಎಷ್ಟು ಬೇಕೋ ಅಷ್ಟೇ ಮಾಡ್ತಾರೆ. ಈ ಕಾಲದವರಿಗೆ ಜರ್ಮನ್ ಭಾಷೆ ಬರಬಹುದು, ಆದರೆ ಸಂಸ್ಕೃತ ತಿಳೀಬೇಕಲ್ಲ?! ಸಂಪ್ರದಾಯದವರ ಮನೆಯಲ್ಲಿ ಒಂದಕ್ಷರ ಮಂತ್ರ ಬಿಡದೆ ಮದುವೆ ಮಾಡಿಸುವುದನ್ನೂ ನೋಡಿದ್ದೇನೆ.

ಸತ್ಯನಾರಾಯಣ ಸ್ವಾಮಿ ಪೂಜೆಗೆ ಕರೆಯುತ್ತಿರುತ್ತಾರೆ. ಗೃಹಪ್ರವೇಶ ಅಂದರೆ 'ಗಣಹೋಮ' 'ಸತ್ಯನಾರಾಯಣ ಪೂಜೆ' ಇದ್ದೇ ಇರುತ್ತದೆ. ಮಾರ್ಡನ್ ಜನಗಳ ಮನೆಗಳಲ್ಲಿ 'ಗಣಹೋಮ' 'ನವಗ್ರಹ ಹೋಮ' 'ಮೃತ್ಯುಂಜಯ ಹೋಮ' 'ಸತ್ಯನಾರಾಯಣ ಪೂಜೆ' ಎಲ್ಲಾ ಸೇರಿ ಎರಡು ಗಂಟೆ ಒಳಗೆ ಮುಗಿಸ್ತಾರೆ. ಕೆಲವು ಸಂಪ್ರದಾಯಸ್ಥರ ಮನೆಗಳಲ್ಲಿ 'ಗಣಹೋಮ' 'ನವಗ್ರಹ ಹೋಮ' 'ಮೃತ್ಯುಂಜಯ ಹೋಮ' ಹಿಂದಿನದಿನ ಇಡೀ ರಾತ್ರಿ ಪೂಜೆ ನಡೆಯುತ್ತೆ. 'ವಾಸ್ತು ಹೋಮ' ಬೆಳಿಗ್ಗೆ 'ಸತ್ಯನಾರಾಯಣ ಪೂಜೆ' ಮುಗಿಯಲು ಮಧ್ಯಾಹ್ನ ಊಟದ ವೇಳೆಯಾಗಿರುತ್ತೆ. ಅದು ಹೇಗೆ?! ಬಲ್ಲವನೇ ಬಲ್ಲ ಬೆಲ್ಲದ ಸವಿಯ!

ಮದುವೆಗೆ ಕರೆದರೆ ಕೆಲವರು ಮುಹೂರ್ತಕ್ಕೆ ಬರದೆ, ಏನೋ ನೆಪ ಹೇಳಿ, ಗಂಡು-ಹೆಣ್ಣಿನ ಕೈ ಕುಲುಕಿ ನಿಧಾನವಾಗಿ ಊಟಮಾಡಿಕೊಂಡು ಹೋಗ್ತಾರೆ. ಮತ್ತೆ ಕೆಲವರು, ಬೆಳಿಗ್ಗೆ ಟಿಫನ್ನಿಗೆ ಬಂದು ಮದುವೆ, ಮಧ್ಯಾಹ್ನದ ಊಟಕ್ಕೆ ಇನ್ನೊಂದು ಮದುವೆ, ರಾತ್ರಿ ಊಟಕ್ಕೆ ಮತ್ತೊಂದು ಆರತಕ್ಷತೆ ಎನ್ನುವ ಹಾಗೆ ಒಂದೇ ದಿನ ಮೂರು ಮದುವೆಗಳಿಗೆ ಹಾಜರಾಗುವುದೂ ಉಂಟು. ಮತ್ತೆ ಕೆಲವರು ಎರಡು ಮೂರು ಮದುವೆಗಳಿಗೆ ಒಂದೇ ದಿನ ಹೋದರೂ ಯಾವ ಮದುವೆಯಲ್ಲೂ ಏನನ್ನೂ ತಿನ್ನದೇ ಫೈವ್‌ಸ್ಟಾರ್ ಹೋಟೆಲಿನಲ್ಲಿ ಊಟ ಮಾಡಿಕೊಂಡು ಮನೆಗೆ ಹೋಗುವುದೂ ಉಂಟು.

'ಲೋಕೋಭಿನ್ನರುಚಿ,'' ಅಂತ ಹಿರಿಯರು ಹೇಳುವುದು ಇದಕ್ಕೇ ಇರ್ಬೇಕು.

ಒಬ್ಬರು ಎಂ.ಎಲ್.ಎ. ಅವರ ಮನೆಯಲ್ಲಿ ಮದುವೆ, ಅವರ ಹಿಂಬಾಲಕರು ಗುಂಪಾಗಿ ಕ್ಷೇತ್ರದ ಮನೆಮನೆಗೂ ಹೋಗಿ ''ಅಣ್ಣಾವ್ರ ಮನೇಲಿ ಮದುವೆ, ಎಲ್ರೂ ಖಂಡಿತವಾಗಿ ಬನ್ನಿ!''

ಎಂದು ಆಹ್ವಾನ ಪತ್ರಿಕೆ ಕೊಟ್ಟು ಹೋದರು. ಶಾಸಕರಿಗೆ ಯಾರ್‍ಯಾರನ್ನ ಕರೆದಿದ್ದಾರೆ ಗೊತ್ತಿಲ್ಲ, ನಾವು ಮದುವೆಗೆ ಹೋದರೆ ನಮ್ಮನ್ನು ಕೇಳುವವರ್‍ಯಾರು? ಎಂದು ವಿಚಾರಿಸಿದೆ. ಆಯಾ ಬಡಾವಣೆ ಕಾರ್ಯಕರ್ತರು ಗಮನಿಸಿಕೊಳ್ತಾರೆ! ಎಂಬ ಉತ್ತರ ಬಂತ, ಆದದ್ದೂ ಹಾಗೆ ಹೋದವರು ಯಾರಿಗೂ ಬೇಜಾರಾಗದ ಹಾಗೆ ಕಾರ್ಯಕರ್ತರು ನೋಡಿಕೊಂಡರಂತೆ.

ಪಕ್ಕದ ರಾಜ್ಯದ ಮುಖ್ಯ ಮಂತ್ರಿಗಳ ಮಗನ ಮದುವೆ, ಯಾಕೆ? ನಮ್ಮ ರಾಜ್ಯದ ಮುಖ್ಯ ಮಂತ್ರಿಗಳೊಬ್ಬರ ಮಗನ ಮದುವೆಗೆ ಐದುದಿನ ಊರಿಗೆ ಊರೇ ಒಲೆ ಹಚ್ಚಲಿಲ್ಲವಂತೆ. ಲಕ್ಷಗಟ್ಟಲೆ ಬಂದ ಜನರಿಗೆ ಅದ್ದೂರಿ ಆತಿಥ್ಯ ನಡೆಯಿತಂತೆ! ಇದು ಬರಗಾಲದಲ್ಲಿ ಇದ್ದಕ್ಕಿದ್ದಂತೆ ಅತಿವೃಷ್ಟಿಯಾದಂತೆ, ಅಲ್ಲವೇ?

ಮಹಾಭಾರತದ ಕತೆಯಲ್ಲಿ, ಭೂರಿಭೋಜನ ಸಿಗುತ್ತದೆಂದು ಹೋದ ವಿಪ್ರ ವೇಷದ ಪಾಂಡವರು, ಕೊನೆಗೆ ದ್ರೌಪತಿಯನ್ನೇ ಮದುವೆಯಾದದ್ದು ಕೌತುಕವಲ್ಲವೇ? ಅದಕ್ಕೇ Marriages are made in heaven ಎಂದದ್ದು.' ಬ್ರಹ್ಮನ ಗಂಟು ತಪ್ಪಿಸೋದಕ್ಕೆ ಆಗಲ್ಲ' ಅಂತ ವೈದಿಕರು ಹೇಳಿದ್ದು ಅದನ್ನೇ ಮದುವೆಗೆ, ಶುಭಕಾರ್ಯಗಳಿಗೆ ಮಂತ್ರ ಆಮಂತ್ರಣ ಪತ್ರಿಕೆ ಕೊಡುವುದು ಮಂತ್ರವಲ್ಲ ರಾಜರ ಕಾಲದಲ್ಲಿ ಯುದ್ಧ ಮಾಡಲೂ ಆಮಂತ್ರಣ ನೀಡುತ್ತಿದ್ದರಂತೆ!

ಕೆಲವರಂತೂ ವೃತ್ತಪತ್ರಿಕೆಗಳಲ್ಲಿ ಪ್ರಕಟಣೆ ನೀಡಿ ವಿವಾಹಕ್ಕೆ ಆಹ್ವಾನ ನೀಡುವುದೂ ಉಂಟು. ವಿದ್ಯುನ್ಮಾನ ಕಾಲದಲ್ಲಿ ಕೇಳಬೇಕೇ? ಈಮೈಲ್ ಮೂಲಕ ಆಮಂತ್ರಣ ನೀಡುವುದು ಸಹಜ ಪದ್ಧತಿ ಎನ್ನುವಂತಾಗಿದೆ. ತಮಿಳು ನಾಡಿನ ಕುಂಭಕೋಣಂ, ತಂಜಾವೂರು, ತಿರುಚಿನಾಪಳ್ಳಿ ಕಡೆ ಜನ ಮದುವೆಯ ಕರೆಯೋಲೆ ಜೊತೆಗೆ ನೂರು ರೂಪಾಯಿಯಿಂದ ಐನೂರು ರೂಪಾಯಿವರೆಗೆ ಹಣಕೊಡುತ್ತಾರೆ. ಆಹ್ವಾನಿತರು ಎಷ್ಟೇ ಶ್ರೀಮಂತರಾದರೂ ಸಂಪ್ರದಾಯವೆಂದು ಸ್ವೀಕರಿಸುತ್ತಾರೆ. ಈ ಪದ್ಧತಿ ನೋಡಿ ನನಗೆ ಆಶ್ಚರ್ಯವಾಗಿದ್ದುಂಟು! 'ಉಂಡೂ ಹೋದ ಕೊಂಡೂ ಹೋದ' ಅಂತಾರಲ್ಲ ಹಾಗಾಯಿತು.

ವಿವೇಕ ಅವನ ಮಗನ ಮದುವೆಗೆ ದೂರವಾಣಿ ಮೂಲಕ ಕರೆದನಲ್ಲ "ಇರಲಿ ನೋಡೋಣ!" ಎಂದು ಮದುವೆಗೆ ಹೋದೆ, ಸಾಕಷ್ಟು ಜನ ಸೇರಿದ್ದರು. ಛತ್ರ ಪಾರ್ಕಿಂಗ್ ಜಾಗ ತುಂಬಿ ಹೋಗಿ, ಪಕ್ಕದ ರಸ್ತೆಯ ಉದ್ದಕ್ಕೂ ಕಾರುಗಳ ಸಾಲು ನಿಂತಿತ್ತು. ಎಲ್ಲಾ ಹೈ ಸೊಸೈಟಿ ಜನ ಓಡಾಡುತ್ತಿದ್ದರು. ನನ್ನ ಕಾರು ನಿಲ್ಲಿಸಲು ಸ್ಥಳವಿಲ್ಲದೆ ಅರ್ಧ ಕಿಲೋಮೀಟರ್ ದೂರದಲ್ಲಿ ನಿಲ್ಲಿಸಬೇಕಾಯಿತು. ಮದುವೆ ಹಾಲ್‌ನಲ್ಲಿ ಕೆಲವರು ನಿಂತಿದ್ದರು, ಕೆಲವರು ಓಡಾಡುತ್ತಿದ್ದರು, ಕೆಲವರು ಕುಳಿತಿದ್ದರು. ಪ್ರವೇಶದ್ವಾರದಲ್ಲಿ ಒಂದು ಕೇಕ್ ತುಂಡು, ಒಂದು ಗ್ಲಾಸು ಕಷಾಯ ಕೊಟ್ಟರು. ಈ ಕಷಾಯ ಕುಡಿದರೆ ಹೊಟ್ಟೆ ಹಸಿವಾಗಿ ತಿಂದದ್ದು ಜೀರ್ಣವಾಗುತ್ತಂತೆ. ಹತ್ತು ನಿಮಿಷಗಳಿಗೊಮ್ಮೆ ನಿಂಬೆಹಣ್ಣಿನ ಪಾನಕ, ಕೋಲ್ಡ್‌ಡ್ರಿಂಕ್ಸ್ ಫ್ರೂಟ್‌ಸಾಲಿಡ್ಸ್ ಸಪ್ಲೈ ಆಗುತ್ತಿತ್ತು. ಮುಹೂರ್ತ ಹತ್ತಿರವಾದರೂ ಗಂಡು ಹೆಣ್ಣು ಮದುವೆ ಮಂಟಪಕ್ಕೆ ಬರಲೇ ಇಲ್ಲ, ವಾಲಗವಿಲ್ಲ, ತೋರಣ ಬಾಳೆಕಂದುಗಳಿಲ್ಲ ಹಸೆಮಣೆಗಳಿಲ್ಲ, ಇದೇನಾಗ್ತಿದೆ ಎಂದು ಅಚ್ಚರಿಯಿಂದ ನೋಡ್ತಿದ್ದೆ. ಮುಹೂರ್ತದ ವೇಳೆಗೆ ಸರಿಯಾಗಿ ಬೆಲೆ

ಬಾಳುವ ಸೂಟು ಧರಿಸಿದ್ದ ವರ ಪ್ರತ್ಯಕ್ಷನಾದ, ಜರತಾರಿ ಸೀರೆ ಉಟ್ಟ ವಧು ಬಂದಳು. ಮದುವೆ ಮಂಟಪದಲ್ಲಿ ನಿಂತರು. ಎಲ್ಲಿಂದಲೋ ಪುರೋಹಿತರನ್ನು (ಎಳೆದು) ಕರೆತಂದರು. ಹಾರ ಬದಲಾಯಿಸಿಕೊಂಡರು. ಪುರೋಹಿತರು 'ಸುಲಗ್ನಾಸಾವಧಾನ' ಸಣ್ಣಶ್ಲೋಕ ಹೇಳಿದ ಕೂಡಲೇ 'ತಾಳಿ' ಕಟ್ಟಿದ ವರ. ಎಲ್ಲಾ ಚಪ್ಪಾಳೆ ತಟ್ಟಿದರು. ಪುರೋಹಿತರಿಗೆ ದಕ್ಷಿಣೆ ಕೊಟ್ಟು ಕಳುಹಿಸಿದರು. ಮದುವೆ ಆಗೇ ಹೋಯ್ತು. ವಧುವರರು ಮದುವೆ ಮಂಟಪದಿಂದ ಇಳಿದು ಬಂದು ಎಲ್ಲರೊಡನೆ ಬೆರೆತು ಮಾತನಾಡುತ್ತಾ ಓಡಾಡುತ್ತಿದ್ದರು. ಒಂದು ಕಡೆ ಬಫೆ ಊಟ ಇನ್ನೊಂದು ಕಡೆ ಗಿಫ್ಟ್‌ಕೌಂಟರ್, ಮುಯ್ಯಿ ಮಾಡುವವರು ಅಲ್ಲಿ ಹೆಸರು ಬರೆಸಿ ಮುಯ್ಯಿಕೊಡಬಹುದಾಗಿತ್ತು. ನಾನು ವಧೂವರರಿಗೆ ವಿಷ್ ಮಾಡಿದೆ. ನಾವಿರುವ ಕಡೆಗೆ ಅವರೇ ಬಂದು ಮಾತನಾಡಿಸುತ್ತಿದ್ದರು. ವಿವೇಕನಿಗೆ 'ಬೈ' ಹೇಳಿ ಹೊರಟೆ. ಸ್ವಲ್ಪದೂರ ನನ್ನ ಜೊತೆ ಬಂದ ಅವನು ಬಾಯಿಬಿಟ್ಟ.

"ಏನು ತಿಳಕೋ ಬೇಡಯ್ಯ, ಅವರಿಬ್ಬರೂ ಆಗಲೇ ರಿಜಿಸ್ಟರ್ಡ್ ಮದುವೆಯಾಗಿ ಹನಿಮೂನ್ ಮುಗಿಸಿಕೊಂಡು ಬಂದಿದ್ದಾರೆ. ಇಬ್ಬರೂ ಅಮೇರಿಕಾಗೆ ಹೋಗ್ತಿದ್ದಾರೆ. ಪಾಸ್‌ಪೋರ್ಟ್, ವೀಸಾ ಎಲ್ಲಾ ಆಗಿದೆ. ನನ್ನ ಬಲವಂತಕ್ಕೆ ಒಪ್ಪಿಕೊಂಡು 'ತಾಳಿ' ಶಾಸ್ತ್ರ ಮಾಡಿದ್ದಾರೆ." ಎಂದ ಪೆಚ್ಚು ಮುಖ ಹಾಕಿಕೊಂಡು ಅವನಿಗೆ ಸಮಾಧಾನ ಹೇಳಿ ಹೊರಟೆ.' ಕಲಿಗಾಲ ಕಲಿಗಾಲ ಎನ್ನುತ್ತಿದ್ದರು ಯಾರೋ.......



ಕೊರವಂಜಿಯಿಂದ



ನಾನು ಬರೆದದ್ದನ್ನೇ ಕಾಪಿ ಮಾಡಿದರೂ ನಿನಗೆ ಬೇರೇ ಉತ್ತರ ಹೇಗೆ ಬಂತೋ?

*ಶರಲೇಖನ ಸಾಹಸ*

# ಕೆಂಗೇರಿ ಕೈಲಾಸಂ ಪ್ರಕರಣ

**- ವತ್ಸನ**



ಬೆಂಗಳೂರಿನ ಚಳಿಗಾಲದ್ದೇ ಒಂದು ನಮೂನೆ. ಬೆಳಗಿನ ಜಾವ ಎಷ್ಟು ಚಳಿ ಇದ್ದರೂ ಮಧ್ಯಾಹ್ನದ ಹೊತ್ತಿಗೆ ಸೆಖೆ ಎನ್ನಿಸುವಷ್ಟು ಬಿಸಿಲು ಏರಿರುತ್ತೆ. ಸಂಜೆ ಆಗ್ತಾ ಬಂದಹಾಗೆ ಸ್ವೆಟರ್ ಹುಡುಕೋ ಅಷ್ಟು ತಂಪಾಗುಕ್ಕೆ ಶುರು. ಅಂದು ಸಂಜೆ ನಾನು ಸ್ವೆಟರ್ ಹಾಕಿಕೊಂಡು ಬಂದು ಅರ್ಧ ಓದಿದ್ದ ಒಡೆಯರ್ಸ್ ಆಫ್ ಮೈಸೂರ್ ಪುಸ್ತಕಾನ ಪುನಃ ಮುಂದುವರಿಸುಕ್ಕೆ ತೆರೆದೆ. ಶರಲೇಖ ಕಿಟಕಿ ಹತ್ರ ನಿಂತಿದ್ದ. ನಾನು ಸೋಫಾ ಮೇಲೆ ಕೂತ ಕೂಡ್ಲೇ "ವತ್ಸನ, ಇಲ್ಲಿ ಸ್ವಲ್ಪ ಕಿಟಕಿ ಹತ್ರ ಬಾ" ಅಂತ ನನ್ನನ್ನ ಕರೆದ. ನಾನು ಅಲ್ಲಿ ಹೋಗಿ ಕಿಟಕಿಯಾಚೆ ನೋಡ್ದೆ. ನಮ್ಮ ಮುಂದಿನ ಬೀದಿಯ ಎಡತುದಿಯಿಂದ ದಂಪತಿಗಳಿಬ್ಬರು ನಡೆದುಕೊಂಡು ಬರುತ್ತಿದ್ದರು. ಆತನಿಗೆ ಸುಮಾರು ಅರುವತ್ತು ವಯಸ್ಸಿರಬಹುದು. ತೆಳುವಾಗಿ ಎತ್ತರವಾಗಿದ್ದ. ಆಕೆ ತನ್ನ ವಯಸ್ಸಿಗಿಂತ ಸ್ವಲ್ಪ ಎಳಸಾಗಿಯೇ ಇದ್ದು ನೋಡುಕ್ಕೆ ಕಳೆಕಳೆಯಾಗಿ ಕಾಣುತ್ತಿದ್ದಳು. ಶರಲೇಖ ಅವರನ್ನು ನನಗೆ ತೋರಿಸಿ, "ಅವರಿಬ್ರೂ ಬಲಮುರಿ ಗಣಪನ ದೇವಸ್ಥಾನದ ಮುಂದೆ ಹಾದುಹೋಗ್ತಾ ಅಲ್ಲೇ ದೇವಸ್ಥಾನದ ಮುಂದೆ ಕೂತಿರೋ ಹೂವಿನ ಮುದುಕಿ ಹತ್ರ ಬಂದಾಗ ಆತ ಒಂದು ಮೊಳ ಮಲ್ಲಿಗೆ ಹೂವು ಕೊಂಡು ಆಕೆಗೆ ಕೊಡ್ತಾನೆ ಅಂತ ನಾನು ಹೇಳ್ತೀನಿ. ಬೆಟ್ ತಗೋತೀಯಾ?" ಅಂತ ನನಗೆ ಛಾಲೆಂಜ್ ಎಸೆದ. ಶರಲೇಖನ ವಿಧಾನ ನನಗೆ ತಿಳಿಯದೇ!. ಇಷ್ಟು ಹೊತ್ತಿಗಾಗಲೇ ಸೂಕ್ಷ್ಮ ದರ್ಶಕದಲ್ಲಿ ಪ್ರಾಣಿಶಾಸ್ತ್ರದ ಸ್ಪೆಸಿಮನ್‌ಗಳನ್ನ ಪರೀಕ್ಷಿಸೋ ಹಾಗೆ, ಅವನು ಅವರಿಬ್ಬರನ್ನೂ ಪರೀಕ್ಷಿಸಿ ಏನೋ ಒಂದು ನಿರ್ಧಾರಕ್ಕೆ ಬಂದುಬಿಟ್ಟಿರ್ತಾನೆ. ಆದರೂ ಅವನನ್ನ ಹ್ಯೂಮರ್ ಮಾಡೋಣ ಅಂದುಕೊಂಡು, "ಆಯ್ತು, ಮೂವತ್ತು ರೂಪಾಯಿ ಬೆಟ್. ಈ ಸಂಜೆ ಹೊತ್ತಿನಲ್ಲಿ ನಿನ್ನನ್ನ ಬೆಟ್‌ನಲ್ಲಿ ಗೆಲ್ಲಿಸೋಕ್ಕೆ ಅಂತ್ಲೇ ಆತ ಹೂವು ಖರೀದಿ ಮಾಡೋ ಛಾನ್ಸ್ ತೀರಾ ಕಡಿಮೆ" ಅಂದೆ. "ಅದೇನು, ಮೂವತ್ತು ರೂಪಾಯಿ ಅಂತ ನಿರ್ಧರಿಸ್ದೆ?" ಅಂತ ಶರಲೇಖ ಕೇಳ್ದ. "ನೀನು ತಾನೇ ಮಹಾ ಪತ್ತೇದಾರ, ಅದನ್ನೂ ನೀನೇ ಹೇಳು ನೋಡೋಣ" ಅಂತ ಅವನ ಪ್ರಶ್ನೆಯನ್ನು ಅವನಿಗೇ ಹಿಂತಿರುಗಿಸಿದೆ.

ಅಷ್ಟು ಹೊತ್ತಿಗೆ ಆ ದಂಪತಿಗಳು ದೇವಸ್ಥಾನವನ್ನು ಸಮೀಪಿಸಿದ್ದರು. ನಾವು ನೋಡುತ್ತಿದ್ದ ಹಾಗೇ ಆತ ಗಕ್ಕನೆ ನಿಂತು ಆಕೆಗೆ ಏನೋ ಹೇಳಿದ. ಆಕೆ ತಲೆಯಾಡಿಸಿದ್ದು ಕಾಣಿಸಿತು. ಆತ ಹತ್ತಿರ ಕೂತಿದ್ದ ಮುದುಕಿಯತ್ತ ಬಗ್ಗಿ ಏನೋ ಹೇಳಿದ. ಆ ಮುದುಕಿ ಒಂದು ಮೊಳ ಮಲ್ಲಿಗೆಯನ್ನು ಅಳೆದು ಬ್ಲೇಡಿನಲ್ಲಿ ಕತ್ತರಿಸಿ, ಅವನ ಕೈಗೆ ಕೊಟ್ಟಿತು. ಅವನು ಅದನ್ನ ಆಕೆಗೆ ನೀಡಿದ. ಆಕೆ ಆ ಹೂವನ್ನು ತನ್ನ ಹೆರಳಿನ ಗಂಟಿನ ಮೇಲೆ ನಾಜೂಕಾಗಿ ಮುಡಿದುಕೊಂಡ ನಂತರ ಅವರಿಬ್ಬರೂ ರಸ್ತೆಯ ಬಲಕ್ಕೆ ತಿರುಗಿ ನಮ್ಮಿಂದ ಮರೆಯಾದರು. ನನಗೆ ಆಶ್ಚರ್ಯವೋ ಆಶ್ಚರ್ಯ. ಶರಲೇಖ ಇಂತಹ ಚಮತ್ಕಾರಗಳನ್ನು ಮಾಡಿದಾಗಲೆಲ್ಲಾ, ಅವನಿಗೇನು ಮಾಂತ್ರಿಕ ಶಕ್ತಿ ಇದೆಯೋ ಅನ್ನಿಸುತ್ತದೆ. ಅವನು ತನ್ನ ವಿಧಾನಗಳನ್ನು ವಿವರಿಸಿದ ಮೇಲೆ ''ಅಯ್ಯೋ, ಇಷ್ಟೇನೇ'' ಅಂತ ಅನ್ನಿಸುತ್ತೆ. ''ಅದು ಹೇಗೆ ಅಷ್ಟು ಕರಾರುವಾಕ್ಕಾಗಿ ಗೆಸ್ ಮಾಡಿದ್ಯೋ ಮಹರಾಯಾ?'' ಅಂತ ಉದ್ಗರಿಸಿದೆ. ಶರಲೇಖ ತನ್ನ ವಿವರಣೆ ಪ್ರಾರಂಭಿಸಿದ.

''ನೋಡು ವತ್ಸನ, ನನ್ನ ಕೆಲಸದಲ್ಲಿ ಗೆಸ್‌ವರ್ಕ್‌ಗೆ ಜಾಗವೇ ಇಲ್ಲ ಅಂತ ಎಷ್ಟುಸಲ ಹೇಳಿಲ್ಲ. ಇದನ್ನೆಲ್ಲಾ ಇಷ್ಟು ಕರಾರುವಾಕ್ಕಾಗಿ ಹೇಳಬೇಕಾದ್ರೆ ಮನುಷ್ಯನ ಸ್ವಭಾವ, ಸಂಬಂಧಗಳ ಬಗ್ಗೆ ಆಳವಾದ ಅಭ್ಯಾಸ ಮಾಡಿರಬೇಕು. ಒಬ್ಬ ಮಹಿಳೆ ಮತ್ತು ಪುರುಷ ಇವರು ಒಟ್ಟಿಗೆ ನಡೆದು ಬಂದಾಗ ಅವರು ದಂಪತಿಗಳಾಗಿರಬೇಕಾದರೆ ಒಂದು ಮುಖ್ಯ ಪ್ರಿ ಕಂಡೀಷನ್ನನ್ನು ಅವರು ಪಾಲಿಸಲೇ ಬೇಕಾಗುತ್ತದೆ. ಅದೇನೆಂದರೆ ಆಕೆ 'ವಟವಟ' ಎಂದೋ, 'ಕವಕವ' ಎಂದೋ ಮಾತನಾಡುತ್ತಲೇ ಇರಬೇಕು. ಆತ ನಿಸ್ತೇಜವಾದ ಮುಖವನ್ನು ಹೊಂದಿ ಕೋಲೇ ಬಸವನ ತರಹ ಆಗಾಗ ತಲೆದೂಗುತ್ತಲೇ ಇರಬೇಕು. ಆಗ ಅವರನ್ನು ಸಂಭಾವಿತ ದಂಪತಿಗಳೆಂದು ಗುರುತಿಸಬಹುದು. ಈ ಜೋಡಿಯನ್ನು ದೂರದಿಂದ ನೋಡಿದಾಗಲೇ ಇದರಲ್ಲಿ ಏನೋ ವ್ಯತ್ಯಾಸವಿರುವಂತೆ ಕಾಣಿಸಿತು. ಹತ್ತಿರ ಬರುತ್ತಿದ್ದ ಹಾಗೆ ಅವರು ಇನ್ನೂ ಸ್ಪಷ್ಟವಾಗಿ ಕಂಡಾಗ ಆತ ಅತ್ಯಂತ ಆಸಕ್ತಿಯಿಂದ ಏನೋ ಹೇಳುತ್ತಿದ್ದದ್ದನ್ನು ನೋಡಿದೆ. ಆಕೆ ಅಷ್ಟೇ ಆಸಕ್ತಿಯಿಂದ ಅವನು ಹೇಳಿದ್ದನ್ನೆಲ್ಲಾ ಕೇಳಿಸಿಕೊಳ್ಳುತ್ತಿದ್ದಳು. ಓಹೋ ಇದರಲ್ಲೇನೋ ಮರ್ಮ ಇದೆ ಅನ್ನಿಸಿತು. ಅಷ್ಟರಲ್ಲಿ ಆತ ಏನೋ ಹೇಳಿದ್ದಕ್ಕೆ ಆಕೆ ನಗಲು ಪ್ರಾರಂಭಿಸಿದಳು. ಭರತ ಖಂಡದ ಐದುಸಾವಿರ ವರ್ಷಗಳ ಇತಿಹಾಸದಲ್ಲಿ ಗಂಡ ಹೇಳಿದ ಮಾತಿಗೆ ಹೆಂಡತಿ ನಕ್ಕದ್ದು ಎರಡೇ ಎರಡು ಸಲ. ಶೂರ್ಪನಖಾ ಪ್ರಕರಣದ ನಂತರ ಒಮ್ಮೆ ರಾಮ ಅದರ ವಿವರಗಳನ್ನು ಸೀತೆಗೆ ವಿವರಿಸುವಾಗ. ಇನ್ನೊಮ್ಮೆ ಭೀಮ ಹಿಡಂಬಿಯೊಡನೆ ಧರ್ಮರಾಯನ ಭೋಳೆತನವನ್ನು ಹೇಳಿ ನಗಿಸಿದಾಗ. ಗಂಡಸು ಮಾತನಾಡೋದು ಅಂದರೇನು, ಹೆಂಗಸು ಅದನ್ನ ಆಸಕ್ತಿಯಿಂದ ಕೇಳಿಸಿಕೊಳ್ಳೋದೇ ಅಲ್ಲದೇ, ಅದಕ್ಕೆ ಸ್ಪಂದಿಸಿ ನಗೋದು ಅಂದರೇನು. ಹಾಗಾಗಿ ಈ ಜೋಡಿ ಗಂಡಹೆಂಡಿರಲ್ಲಾ ಎಂದು ನಿರ್ಧರಿಸಿದೆ. ಹಾಗಾದರೆ ಪ್ರೇಮಿಗಳೇ? ಈ ವಯಸ್ಸಿನಲ್ಲಿ, ಈ ಬನಶಂಕರಿಯಲ್ಲಿ, ಆ ಸಾಧ್ಯತೆ ಅಸಾಧ್ಯವಲ್ಲದಿದ್ದರೂ ಸಂಭವ ಕಡಿಮೆ ಅನ್ನಿಸಿತು. ಇದನ್ನೆಲ್ಲಾ ಯೋಚಿಸಿ ಅವರುಗಳು ಅಕ್ಕಪಕ್ಕದ ಮನೆಯವರಿರಬೇಕು. ಎಲ್ಲ ದಂಪತಿಗಳಂತೆ ತಮ್ಮ ತಮ್ಮ ಬಾಳಸಂಗಾತಿಗಳಲ್ಲಿ ರೋಸಿಹೋಗಿ ಇವರುಗಳು ಈ ರೀತಿ ಪರಸ್ಪರ ಸಾಂತ್ವನ ಪಡೆಯುತ್ತಿಬಹುದೆಂದು ನಿರ್ಧರಿಸಿದೆ. ಇಂತಹ ಪರಿಸ್ಥಿತಿಯಲ್ಲಿ ಆ ಗಂಡಸಿಗೆ ಮಲ್ಲಿಗೆ ಹೂವು ಕಾಣಿಸಿದರೆ, ಹೋರಿಯ ಮುಂದೆ ಕೆಂಪು ನಿಶಾನೆ ಬೀಸಿದಂತೆ

ಆಗುತ್ತದೆ. ಆತನಿಗೆ 'ನಿಮ್ಮನ್ನು ಪ್ರೇಮಿಸುತ್ತೇನೆ' ಎಂದು ಹೇಳುವ ತಾಖತ್ತಿಲ್ಲದೇ (ಹೇಳಿದರೆ ಕೆನ್ನೆಗೆ ಬೀಳುವ ಪ್ರಕ್ಷಾಳನಕ್ಕೆ ಹೆದರಿ) 'ನಿಮ್ಮ ಹೆರಳಿಗೆ ಮಲ್ಲಿಗೆ ಬಹು ಚೆನ್ನು' ಅಂತ ಹೇಳಿ ಆಕೆ ಆ ಮಾತಿಗೆ ಉತ್ತರಿಸದೇ, ಮೆಲುನಗೆಯೊಂದನ್ನು ಬೀರಿದರೆ, ತನ್ನ ಗುರಿ ಸಾಧನೆಯಾಯಿತೆಂದು ಆತ ಭಾವಿಸುತ್ತಾನೆ. ನನ್ನ ಥಿಯರಿಯನ್ನು ಪರೀಕ್ಷಿಸಲು ನಿನ್ನ ಹತ್ತಿರ ಬೆಟ್ ಕಟ್ಟಿದೆ. ನಾನೆಂದುಕೊಂಡಂತೇ ಆಯಿತು. 'ನಾನು ಮೂವತ್ತು ರೂಪಾಯಿ ಮಾತ್ರ ಬೆಟ್ ಕಟ್ಟಿದ್ದೇಕೆ ಅಂತ ಹೇಳಲಿಲ್ಲವಲ್ಲಾ' ಅಂತ ಕೇಳಿದೆ.

'ಒಂದು ಪುಟ್ಟ ಕಿಂಗ್‌ಫಿಷರ್ ಪಕ್ಷಿಯ ಬೆಲೆ' ಎಂದ ಶರಲೇಖ. ಅಷ್ಟು ಹೊತ್ತಿಗೆ ಅವನ ಫೋನು ರಿಂಗಾಯಿತು. ಆತ ಏನೋ ಮಾತನಾಡಿ ಫೋನನ್ನು ಸ್ವಿಚ್‌ಆಫ್ ಮಾಡಿದ. ನಾನು ಪ್ರಶ್ನಾರ್ಥಕವಾಗಿ ಹುಬ್ಬೇರಿಸಿದೆ.

'ಅದ್ಯಾರೋ ಹಳೇಬೀಡು ಕೃಷ್ಣಮೂರ್ತಿ ಅಂತೆ. ಸಾರ್ ತುಂಬಾ ಕಷ್ಟದಲ್ಲಿದ್ದೇನೆ ಕೈ ಬಿಡಬೇಡಿ ಅಂತ ಅಲವತ್ತುಕೊಂಡರು. ಆಗ್ಲಿ ಬನ್ನಿ ಅಂದೆ. ಇಲ್ಲೇ ಮಾನೋಟೈಪ್ ಹತ್ರ ಇದೀನಿ. ಈಗ್ಲೇ ಬಂದೆ ಅಂದ್ರು. ನೀನು ಸ್ವಲ್ಪ ಟೀ ಮಾಡಿದ್ರೆ ನಾನು ಡಬ್ಬದಲ್ಲಿರೋ ತೇಂಗೊಳಲನ್ನು ತಟ್ಟೆಗೆ ಹಾಕಿ ತರ್ತೀನಿ.' ಎಂದ ಶರಲೇಖ. ಟೀ ತಯಾರಿ ನಡೆಯುವ ಹೊತ್ತಿಗೆ ಆಸಾಮಿ ಪ್ರತ್ಯಕ್ಷವಾಗಿತ್ತು ಬಸವನ ಹಿಂದೆ ಬಾಲ ಅನ್ನೋಹಾಗೆ ಇನ್ನೊಂದು ಹೆಗಲು ಚೀಲ ಅವರ ಸಂಗಡ ಬಂದಿತ್ತು.

ಶರಲೇಖ ಬಹು ವಿನಯದಿಂದಲೇ ಅವರಿಬ್ಬರನ್ನು ಸ್ವಾಗತಿಸಿ, 'ನನ್ನಿಂದ ಏನಾಗಬೇಕು ಹೇಳಿ' ಅಂತ ಕೇಳಿದ.

ಹ.ಕೃ ಬಹಳ ಸಂಕೋಚ ಸ್ವಭಾವದವರಾಗಿ ಕಾಣುತ್ತಿದ್ದರು. 'ಸಾರ್ ನಿಮಗೆ ವೃಥಾ ತೊಂದರೆ ಕೊಡ್ತಾ ಇದೀವಿ. ತಾವು ಖ್ಯಾತ ಪತ್ತೇದಾರರು. ಬಿಡುವಿಲ್ಲದ ಕೆಲಸಕಾರ್ಯಗಳು ನಿಮಗೆ.' ಅಂತ ಶುರು ಮಾಡಿ ಶರಲೇಖನ ಉನ್ನತ ಸ್ಥಾನ, ಅವನ ಬಗ್ಗೆ ತಮಗಿರುವ ಗೌರವ, ತಮ್ಮ ಕ್ಷುಲ್ಲಕ ಕೆಲಸಕ್ಕೆ ಶರಲೇಖನ ಸಹಾಯ ಕೇಳಿದ್ದಕ್ಕೆ ಕ್ಷಮೆ ಇದನ್ನೆಲ್ಲಾ ಹೇಳುತ್ತಾ ಅರ್ಧ ಗಂಟೆಕಾಲ ಕೊರೆದರು.

ಶರಲೇಖ ಇದನ್ನೆಲ್ಲಾ ಮಾತಿಲ್ಲದೇ ಕೇಳಿಸಿಕೊಂಡ ಆಮೇಲೆ ಗಡಸು ಧ್ವನಿಯಲ್ಲಿ 'ಒಂದು ನಿಮಿಷ ತಡೀರಿ' ಅಂತ ಹೇಳಿ ಒಳಗೆ ಹೋದ. ರೂಮಿನಿಂದ ಹೊರಗೆ ಬಂದಾಗ ಶರಲೇಖನ ಕೈಯ್ಯಲ್ಲಿ ಒಂದು ಪಿಸ್ತೂಲು. 'ನೇರವಾಗಿ ವಿಷಯಕ್ಕೆ ಬರ್ತೀರೋ ಅಥವಾ ಗುಂಡು ಹಾರಿಸಲೋ' ಅಂತ ಘರ್ಜಿಸಿದ ಶರಲೇಖ.

ಹ.ಕೃ ಕಂಗಾಲಾದಂತೆ ಕಂಡಿತು. 'ಕ್ಷಮ್ಸಿ ಸಾರ್. ವಿಷಯ ಇಷ್ಟೇ. ಕಗ್ಗದಾಸಪುರದಲ್ಲಿ ನಾಳೆ ಒಂದು ನಗೆ ಕಾರಂಜಿ ಅಂತ ಇಡೀ ದಿನದ ಹಾಸ್ಯ ಕಾರ್ಯಕ್ರಮ ಏರ್ಪಡಿಸಿದ್ದೀವಿ. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಬರುಕ್ಕೆ ಖ್ಯಾತ ನಗೆಗಾರ ಕೆಂಗೇರಿ ಕೈಲಾಸಂ ಒಪ್ಪಿ ಕೊಂಡಿದ್ದಾರೆ. ಕೇಂಗೇರಿ ಕೈಲಾಸಂ ತಮಗೆ ಗೊತ್ತಿರ ಬೇಕಲ್ಲಾ'.

ಶರಲೇಖ 'ಗೊತ್ತಿಲ್ಲದೇ ಏನು. ಕೆಂಗೇರಿಲಲ್ವೇ ಅವ್ರು ಇರೋದು. ಅವ್ರ ಹೆಸ್ರು ಕೈಲಾಸಂ ಅಲ್ವೇ. ನಗೆಗಾರ್ರು ತಾನೇ ಅವ್ರು' ಅಂದ.

ಶರಲೇಖಿನ ಸರ್ಕಾಸಂ ಹ.ಕೃ ಅವರನ್ನು ತಪ್ಪಿಸಿಕೊಂಡು ಓಡಿತು.

'ಹೌದು ಸಾರ್ ಅವ್ರೇ. ಅವರು ಒಪ್ಪಿಕೊಂಡಿದ್ದು ನಮಗೆಲ್ಲಾ ಬಹಳ ಸಂತೋಷ ಆಯ್ತು. ಮಿಕ್ಕ ಎಲ್ಲಾ ಭಾಷಣಕಾರರನ್ನೂ ಒಪ್ಪಿಸಿದ್ದೂ ಆಯಿತು. ನಿನ್ನೆ ನಮಗೆ ಒಂದು ಆಘಾತ ಆಯ್ತು ಸಾರ್. ಅದನ್ನ ನಮ್ಮ ಕಾರ್ಯದರ್ಶಿ ಜ್ಞಾನಮಣಿ ನಿಮಗೆ ವಿವರಿಸ್ತಾರೆ.' ಎಂದರು ಹ.ಕೃ.

ಹೆಗಲುಚೀಲ ನಂಬರ್ ಟು ಶರಲೇಖಿನನ್ನು ಕುರಿತು 'ಸಾರ್, ನಮ್ಮ ಕಾರ್ಯಕ್ರಮ ನಡೆಸುಕ್ಕೆ ಅನೇಕ ಪ್ರಾಯೋಜಕರು ಮುಂದೆ ಬರ್ತಾರೆ. ಒಬ್ಬರು ಆರ್ಮುಗಮ್ ಅಂತ. ಬಹಳ ಉದಾರ ದಾನಿಗಳು. ಹಾಸ್ಯ ಅಂದ್ರೆ ಅವರಿಗೆ ತುಂಬಾ ಅಭಿಮಾನ.ಈ ಬಾರಿ ಸಹಾ ಅವರು ಬಹಳ ಸಹಾಯ ಮಾಡಿದ್ದಾರೆ. ನಿನ್ನೆ ಅವರನ್ನು ನೋಡಲು ಹೋಗಿದ್ದಾಗ ಅವರು ನನಗೆ ಒಂದು ವಿಷಯಾನ ಗೋಪ್ಯವಾಗಿ ಹೇಳಿದರು.ಅವರಿಗೆ ಕೆಂಗೇರಿ ಕೈಲಾಸಂ ಬಹಳ ಪರಿಚಿತರಂತೆ. ನಿನ್ನೆ ಅವರೊಂದಿಗೆ ಆರ್ಮುಗಮ್ ಕ್ಲಬ್ಬಿನಲ್ಲಿ ಹರಟೆ ಹೊಡೀತಿದ್ದಾಗ, ಕೆಂಗೇರಿ ಅವರು ಒಂದು ಮಾತು ಹೇಳಿದರಂತೆ. ಅವರ ಮಾತಿನಲ್ಲೇ ಹೇಳೋದಾದ್ರೆ, ಅವರು ಹೇಳಿದ್ದಿಷ್ಟು.

'ನೋಡ್ರಿ ಆರ್ಮುಗಮ್, ನನ್ನ ನಗೆ ಕಾರಂಜಿ ಕಾರ್ಯಕ್ರಮಕ್ಕೆ ಭಾಷಣ ಮಾಡುಕ್ಕೆ ಕರೆದಿದಾರೆ. ಏನು ಧಿಮಾಕು ರೀ ಆ ಹಳೇಬೀಡು ಕೃಷ್ಣಮೂರ್ತಿಗೇ. 'ಸಾರ್ ನಿಮಗೆ ಹದಿನೈದೇ ನಿಮಿಷ ಕಾಲಾವಕಾಶ. ದಯಮಿಟ್ಟು ಅದನ್ನ ಮೀರಬೇಡಿ' ಅಂತಾನಲ್ಲಾ. ನನಗೆ, ಕೆಂಗೇರಿ ಕೈಲಾಸಂಗೆ ಈ ರೀತಿ ಕಾಲಾವಧಿ ನಿರ್ಧರಿಸೋದು ಅಂದ್ರೇನು. ಕಾಲಾವಧಿ ಮೀರಿದ್ರೆ ಚೀಟಿ ಕಳಿಸಬೇಕಾಗುತ್ತೆ ಅಂದ ಬೆದರಿಕೆ ಬೇರೇ ಹಾಕ್ದ. ಅವನಿಗೆ ಈ ಬಾರಿ ಸರಿಯಾಗಿ ಬುದ್ಧಿ ಕಲಿಸಬೇಕು ಅಂತಿದೀನಿ. ಒಮ್ಮೆ ನನ್ನ ಭಾಷಣ ಶುರು ಆದಮೇಲೆ, ಬ್ರಹ್ಮ ಬಂದ್ರೂ ನಿಲ್ಲಿಸುಕ್ಕಾಗುಲ್ಲ ಅದನ್ನ. ಎಷ್ಟು ಬೇಕಾದ್ರೂ ಚೀಟಿ ಕಳಿಸ್ಲಿ, ನಲವತ್ತು ನಿಮಿಷಗಳಿಗೆ ಕಡಿಮೆ ಇಲ್ದೆ ಭಾಷಣ ಕೊರೀತೀನಿ. ಆಹಹಹ, ಪಂಕ್ಚುಯಾಲಿಟಿ ಪಂಡಿತ ಅಂದ್ಕೊಂಡ್‌ಬಿಟ್ಟಿದಾನೆ ಈ ಹಳೇಬೀಡು' ಅಂತೆಲ್ಲಾ ಎಗರಾಡಿದ್ರಂತೆ. ನಾಳೇನೆ ನಮ್ಮ ಕಾರ್ಯಕ್ರಮ. ಕೆಂಗೇರಿ ಕೈಲಾಸಂ ಅವರು ನಲವತ್ತು ನಿಮಿಷ ತಗೊಂಡ್‌ಬಿಟ್ರೆ ನಮ್ಮ ಕಾರ್ಯಕ್ರಮ ಎಲ್ಲಾ ಏರುಪೇರಾಗುತ್ತೆ ಅಂತ ನಮಗೆ ಚಿಂತೆ ಆಗ್ಬಿಟ್ಟಿದೆ. ತಾವೇ ಏನಾದ್ರೂ ಪರಿಹಾರ ತಿಳಿಸ್ಬೇಕು' ಅಂದಿತು ಆ ಬಸವನ ಬಾಲ.

ಶರಲೇಖಿ ಒಂದು ನಿಮಿಷ ಮಾತನಾಡಲಿಲ್ಲ. ಆಮೇಲೆ ಹ.ಕೃ ರನ್ನು ಕುರಿತು, 'ಕಾರ್ಯಕ್ರಮದ ವಿವರ ನಿಮ್ಮ ಹತ್ರ ಇದೆಯೇ' ಅಂತ ಕೇಳಿದ. ಪ್ರಾಣಿ ತನ್ನ ಹೆಗಲು ಚೀಲದಲ್ಲಿ ಹುಡುಕಿ ಒಂದು ಚೀಟಿಯನ್ನು ಹೆಕ್ಕಿ ಶರಲೇಖಿನ ಕೈಗೆ ವರ್ಗಾಯಿಸಿತು. ಶರಲೇಖಿ ಅದನ್ನ ಕೂಲಂಕಷವಾಗಿ ಪರಿಶೀಲಿಸಿ, 'ಇದರಲ್ಲಿ ಕೆಲವು ಸಣ್ಣ ಬದಲಾವಣೆಗಳನ್ನು ಮಾಡುಕ್ಕೆ ಒಪ್ಪಿದ್ರೆ ನಾನು ನಿಮಗೆ ಸಹಾಯ ಮಾಡಬಲ್ಲೆ' ಅಂದ. ಅವರಿಬ್ಬರೂ ಒಕ್ಕೊರಲಿನಿಂದ 'ಏನು ಬೇಕಾದ್ರೂ ಮಾಡ್ತೀವಿ. ಆತ ಕೊಟ್ಟ ಕಾಲಾವಧಿಯಲ್ಲಿ ಭಾಷಣ ಮುಗಿಸೋಹಾಗಾದ್ರೆ.' ಅಂತ ಹೇಳಿದ್ರು.

'ಸರಿ, ನಾಳೆ ಬೆಳಗ್ಗೆ ನಾವಿಬ್ರೂ ಅಲ್ಲಿಗೆ ಬರ್ತೀವಿ. ಬದಲಾವಣೆ ಬಗ್ಗೆ ಅಲ್ಲೇ ಹೇಳ್ತೀನಿ ಮೊದಲೇ ಹೇಳಿದ್ರೆ ಯಾರಿಗಾದ್ರೂ ಸುಳಿವು ಸಿಕ್ಕಿ ಕೆಲಸ ಕೆಡೋ ಸಂಭವ ಇರುತ್ತೆ' ಎಂದು ಹೇಳಿ ಬಂದೋರಿಗೆ ಕಾಫಿ ತೇಂಗೊಳಲು ಆತಿಥ್ಯ ನೀಡಿ ಅವರನ್ನು ಸಾಗಹಾಕಿದ ಶರಲೇಖ.

ಮಾರನೆಯ ದಿನ ಬೆಳಗ್ಗೆ ಒಂಭತ್ತೂವರೆ ಗಂಟೆಗೇ ನಾವಿಬ್ಬರೂ ಹಾಸ್ಯಕಾರಂಜಿ ಕಾರ್ಯಕ್ರಮದಲ್ಲಿ ಹಾಜರಾದೆವು. ಕಿಕ್ಕಿರಿದ ಜನಸ್ತೋಮ ಅಂತಾರಲ್ಲಾ ಹಾಗೆ ಜನ ಸೇರಿದ್ರು. ಹೆಗಲು ಚೀಲ ನಂಬರ್ ಟು ನಮ್ಮನ್ನ ಎದಿರುಗೊಂಡು, ಮುಂದಿನ ಸಾಲಿನಲ್ಲಿ ಕೂರಿಸಿತು. ಅಷ್ಟು ಹೊತ್ತಿಗೆ ಹ.ಕೃ ಬಂದು ಶರಲೇಖನನ್ನು ವೇದಿಕೆಯ ಹಿಂಭಾಗಕ್ಕೆ ಕರೆದೊಯ್ದರು.. ನಾನು ಒಬ್ಬನೇ ಮುಂದಿನ ವಿದ್ಯಮಾನಗಳನ್ನ ನಿರೀಕ್ಷಿಸುತ್ತಾ ಕುಳಿತೆ. ಹತ್ತು ಗಂಟೆಗೆ ಸರಿಯಾಗಿ ಹಾಸ್ಯಕಾರಂಜಿ ಕಾರ್ಯಕ್ರಮ ಪ್ರಾರಂಭವಾಯಿತು. ಮೊದಲಿಗೆ ಯಾವುದೋ ತಮಾಷಿ ಸ್ವಾಗತ ಗೀತೆ. ಆಮೇಲೆ ಯಥಾಪ್ರಕಾರ ದೀಪ ಬೆಳಗಿ ಕಾರ್ಯಕ್ರಮ ಶುರು. ಮುಖ್ಯ ಅತಿಥಿಗಳು ಮಾತನಾಡಿದ ನಂತರ ಹ.ಕೃ ಮೈಕಿಗೆ ಬಂದು, 'ಈಗ ಒಂದು ಸಮ್ಮೋಹಿನಿ ಡಿಮೋ ಇದೆ. ಖ್ಯಾತ ಸಮ್ಮೋಹಿನಿಗಾರರಾದ ಶರಲೇಖ ಅವರು ಐದು ನಿಮಿಷಗಳ ಕಾಲ ಈ ಪ್ರಯೋಗಾನ ನಮಗೆ ಮಾಡಿ ತೋರಿಸ್ತಾರೆ. ಅಂತ ಹೇಳಿದ ನಂತರ ಶರಲೇಖ ಉದ್ದ ನಿಲುವಂಗಿ ತೊಟ್ಟು ವೇದಿಕೆಗೆ ಬಂದ. ಅವನ ಈ ಅವತಾರ ನನಗೆ ಹೊಸದು. ಅಂದು ಶರಲೇಖ ತೋರಿದ ಹಿಪ್ನಾಟಿಸಂ ಕೌಶಲ ನಿಜಕ್ಕೂ ಅದ್ಭುತವಾಗಿತ್ತು. ಸಭೆಯಲ್ಲಿದ್ದ ಹಲವು ಜನರನ್ನ ವೇದಿಕೆಗೆ ಕರೆದು ಸಾಲಾಗಿ ನಿಲ್ಲಿಸಿ ಅವರನ್ನು ಅನೇಕ ವಿಚಿತ್ರ ಭಂಗಿಗಳನ್ನು ಮಾಡುವಂತೆ ಪ್ರೇರೇಪಿಸೋದರಿಂದ ಹಿಡಿದು ಸಮಾರಂಭದ ಅಧ್ಯಕ್ಷರ ಕೈಗಡಿಯಾರವನ್ನು ಅವರಿಗೆ ತಿಳಿಯದಂತೆಯೇ ಮಂಗಮಾಯ ಮಾಡಿ ಅನಂತರ ಅವರಿಗೆ ಹಿಂತಿರುಗಿಸುವವರೆಗೂ ಅವನ ಐಟಮ್ಮುಗಳೆಲ್ಲಾ ಬಹು ಚೆನ್ನಾಗಿದ್ದವು. ಕೊನೆಗೆ ಶರಲೇಖ ವೇದಿಕೆಯ ಮೇಲೆ ಕುಳಿತಿದ್ದ ಕೆಂಗೇರಿ ಕೈಲಾಸಂ ಅವರ ಕಡೆ ತಿರುಗಿ, 'ನಾಡಿನ ಖ್ಯಾತ ನಗೆಗಾರರಾದ ಕೆಂಗೇರಿ ಕೈಲಾಸಂ ಅವರಿರುವ ವೇದಿಕೆಯ ಮೇಲೆ ನನ್ನಂತಹ ಅಲ್ಪನಿಗೂ ಅವಕಾಶ ಸಿಕ್ಕಿರುವುದು ನನ್ನ ಸೌಭಾಗ್ಯ. ಅವರ ಬಗ್ಗೆ ನನಗಿರುವ ಗೌರವವನ್ನು ತೋರಿಸಲು ಈ ಪುಟ್ಟ ಉಡುಗೊರೆಯನ್ನು ಅವರು ನನ್ನಿಂದ ಸ್ವೀಕರಿಸಬೇಕೆಂದು ಕೋರುವೆ' ಎನ್ನುತ್ತಾ ಅವರನ್ನು ತನ್ನ ಬಳಿಗೆ ಆಹ್ವಾನಿಸಿದ. ಹೊಗಳಿಕೆಗೆ ಹಿಗ್ಗುತ್ತಾ ಕೆಂಗೇರಿ ಅವನ ಬಳಿ ಬಂದರು. ಅವರಿಗೆ ಉಡುಗೊರೆ ಕೊಡುತ್ತಿದ್ದಂತೆಯೇ ಅವನು ಅವರ ಕಿವಿಯಲ್ಲಿ ಏನೋ ಹೇಳಿದ. ಅವರೂ ತಲೆದೂಗಿದ್ದು ಸಭೆಗೆ ಕಾಣಿಸಿತು.

ಅನಂತರ ಕೆಂಗೇರಿಯವರ ಭಾಷಣ ಪ್ರಾರಂಭವಾಯಿತು. ಜನರ ನಿರೀಕ್ಷೆಯನ್ನು ಆತ ಹುಸಿಗೊಳಿಸಲಿಲ್ಲ. ಅಷ್ಟು ಹೊತ್ತಿಗೆ ಶರಲೇಖ ವೇದಿಕೆಯಿಂದ ಇಳಿದು ನನ್ನ ಬಳಿ ಬಂದು ಕುಳಿತಿದ್ದ. ಹದಿನೈದು ನಿಮಿಷಗಳು ಆಗುತ್ತಾ ಬಂದಹಾಗೆ ಹ.ಕೃ ಮುಖ ಆತಂಕ ಚಿಂತೆಗಳಿಂದ ತುಂಬಿದಂತೆ ಕಂಡಿತು. ಕೆಂಗೇರಿಯವರು 'ಭಾಷಣ ಮುಗಿಸುಕ್ಕೆ ಮುಂಚೆ ಇನ್ನೊಂದೆರಡು......' ಅಂತ ಹೇಳುತ್ತಿದ್ದವರು ಅರ್ಧವಾಕ್ಯದಲ್ಲೇ ತಮ್ಮ ಮಾತನ್ನು ತುಂಡರಿಸಿ. ವೇದಿಕೆಯ ಮೇಲಿನ ತಮ್ಮ ಜಾಗಕ್ಕೆ ಹೋಗಿ ಕುಳಿತುಬಿಟ್ಟರು. ಜನ ಇದೂ ಒಂದು

ಜೋಕಿರಬಹುದೆಂದು ಭಾವಿಸಿ, ಪ್ರಚಂಡ ಕರತಾಡನ ಮಾಡಿದರು. ಹ.ಕೃ. ಚಿಂತೆಯಿಂದ ಮುಕ್ತರಾಗಿ ಪ್ರಸನ್ನವದನದಿಂದ ಅಂದಿನ ಕಾರ್ಯಕ್ರಮವನ್ನು ಮುಂದುವರಿಸಿದರು.

'ಅವನ ಕಿವಿಯಲ್ಲಿ ಏನು ಹೇಳಿದೆ? ಅಷ್ಟು ಸಡನ್ನಾಗಿ ಮಾತು ನಿಲ್ಲಿಸಿ ಸ್ವಸ್ಥಾನಕ್ಕೆ ಹೋಗಿ ಕುಳಿತುಬಿಟ್ಟನಲ್ಲಾ, ಅಲ್ದೆ ಹಿಪ್ನಾಟಿಸಮ್ ಯಾವಾಗ ಕಲಿತದ್ದು ನೀನು?' ಅಂತ ಶರಲೇಖನನ್ನ ಕೇಳಿದೆ.

'ವಿದ್ಯಾರ್ಥಿಯಾಗಿದ್ದಾಗ ಇದೂ ನನ್ನದೊಂದು ಹಾಬಿ. ಅಮೆಚೂರ್ ಹಿಪ್ನಾಟಿಸ್ಟ್ಸ್ ಅಸೋಸಿಯೇಷನ್ನಿನ ಅಧ್ಯಕ್ಷ ಸಹಾ ಆಗಿದ್ದೆ ಹಲವು ಕಾಲ. ಇವತ್ತು ಅದು ಉಪಯೋಗಕ್ಕೆ ಬಂತು. ಹ.ಕೃ. ಅಷ್ಟು ಅಲವತ್ತುಕೊಂಡಾಗ, ಅಯ್ಯೋಪಾಪ ಅನ್ನಿಸಿತು. 'ನನಗೊಂದು ಐದು ನಿಮಿಷ ಕೊಡಿ. ನಿಮ್ಮ ಸಮಸ್ಯೆ ಪರಿಹಾರ ಮಾಡ್ತೀನಿ' ಅಂತ ಹೇಳಿದೆ. ವೇದಿಕೆಗೆ ಹೋದಾಗ ಮಿಕ್ಕ ಐಟಂಗಳನ್ನು ಮಾಡೋವಾಗ್ಲೇ ಆ ಕೆಂಗೇರಿ ಮಹಾಶಯನನ್ನೂ ಹಿಪ್ನಾಟಿಕ್ ಟ್ರಾನ್ಸ್‌ನಲ್ಲಿ ಹೋಗುವಂತೆ ಮಾಡಿದೆ. ಆಮೇಲೆ ಉಡುಗೊರೆ ಕೊಡುವ ನೆವದಲ್ಲಿ ಅವನನ್ನ ಹತ್ತಿರ ಬರಮಾಡಿಕೊಂಡು, ಅವನ ಕಿವಿಯಲ್ಲಿ, ''ಹತ್ತು ನಿಮಿಷ ಭಾಷಣ ಮಾಡಿದ ನಂತರ ತಕ್ಷಣ ಭಾಷಣ ನಿಲ್ಲಿಸು. ಆಮೇಲೆ ಎಂಟು ಗಂಟೆಗಳ ಅವಧಿ ಮುಗಿದ ತಕ್ಷಣ ಮುಂದುವರಿಸಿ ಭಾಷಣ ಮಾಡಬೇಕೆಂದುಕೊಂಡಿದ್ದಷ್ಟು ಕಾಲ ಮಾಡಿ ಮುಗಿಸು'' ಅಂತ ಹೇಳಿ ಅವನನ್ನ ಟ್ರಾನ್ಸ್‌ನಿಂದ ಹೊರತಂದೆ. ಇವತ್ತು ಸಂಜೆ ಮನೆಗೆ ಹೋದಮೇಲೆ ತನ್ನ ಹೆಂಡತಿ ಮಕ್ಕಳ ಮುಂದೆ ಆತ ಮನಸ್ವೇಚ್ಛೆಯಾಗಿ ಕೊರೆಯಲಿ'' ಅಂದ ಶರಲೇಖ.






ಈ ಗೋಳು ಸರ್ಕಾರ ಬಂತು ನೋಡಿ, ತಡೆಯುಕ್ಕಾಗುಲ್ಲ, ಅಷ್ಟು ಸೆಖೆ!

# ಸೀರಿಯಲ್ ಸಂಸ್ಕೃತಿ

**- ಕೃಷ್ಣ ಸುಬ್ಬರಾವ್**

ನನಗೆ ಒಮ್ಮೆ ಆರೋಗ್ಯ ಹದಗೆಟ್ಟಿತ್ತು. ನಮ್ಮ ಫ್ಯಾಮಿಲಿ ಡಾಕ್ಟರು ತಮ್ಮ ಮಾಮೂಲಿನ ಔಷಧ ಕೆಲಸ ಮಾಡಿದಂತೆ ಕಾಣದಿದ್ದಾಗ 'ಬ್ಲಡ್ ಕಲ್ಚರ್ (Culture) ಪರೀಕ್ಷೆ ಮಾಡಿರಿ' ಎಂದು ಆದೇಶ ನೀಡಿದರು. ನಾನು ಸಾರ್ ನಮ್ಮ ವಂಶದ ಸಂಸ್ಕೃತಿ ಬಹಳನೇ ಚೆನ್ನಾಗಿದೆ ಅದು ನಿಮಗೂ ಗೊತ್ತು ಎಂದೆ. ಡಾಕ್ಟರು ನಗುತ್ತಾ ಬ್ಯಾಕ್ಟೀರಿಯಾ ಬೆಳೆಯುತ್ತಾನೆ ಇರುತ್ತವೆ. ಅದರ ವಿವರಣೆ ತಿಳಿದರೆ ನಮಗೆ ಯಾವ ರೀತಿ ಮದ್ದನ್ನು ಕೊಡಬಹುದೆಂದು ತಿಳಿಯುತ್ತದೆ. ಅದಕ್ಕೆ ಆ ಪರೀಕ್ಷೆ ಎಂದು ತಿಳಿಸಿದರು. ಸಂಸ್ಕೃತಿ ಎಂದರೆ ಏನೆಲ್ಲಾ ಅರ್ಥವಿದೆ, ಬೇರೊಂದು ಅರ್ಥಕೋಶ ನೋಡಿದರೆ ಅಲ್ಲಿ ಕೃಷಿ, ವ್ಯವಸಾಯ, ಬೆಳೆ ಎಂದೆಲ್ಲ ಹೇಳಿತ್ತು. ಬುದ್ಧಿ ವಿಕಾಸ, ಮಾನಸಿಕವಾದ ಪಕ್ವತೆ ಎಂದೆಲ್ಲ ಅರ್ಥವೂ ಇತ್ತು. ಇಷ್ಟೊಂದು ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಟಿ.ವಿ.ಯಲ್ಲಿ ಬರುವ ಧಾರವಾಹಿಗಳನ್ನು (ಸೀರಿಯಲ್) ಏಕೆ ನೋಡಬಾರದು ಅನ್ನಿಸಿತು.

ಟಿ.ವಿ. ವ್ಯಸನಿಗಳಿಗೆ ದೆವ್ವದ ಕಾಟದ ಭಯವಿಲ್ಲ, ಏಕೆಂದರೆ ಕೆಲಸವಿಲ್ಲದ ಮೆದುಳಿಗೆ ದೆವ್ವದ ಕಾರ್ಖಾನೆ ಹಂಗಿಲ್ಲ, ನೂರಾರು ಚಾನೆಲ್‌ಗಳಿವೆ. ಸಾವಿರಾರು ಸೀರಿಯಲ್‌ಗಳಿವೆ. ಪುಟ್ಟ ಮೆದುಳಿನಲ್ಲಿ ಅದೆಷ್ಟು ಬಗೆಯ (ಕೆಟ್ಟ) ಆಲೋಚನೆಗಳನ್ನು ಮಾಡಬಹುದು ಒಳ್ಳೆಯವರನ್ನು, ಅಮಾಯಕರನ್ನು ಶೋಷಣೆ ಮಾಡಬಹುದು ಎಂಬುದನ್ನು ತೋರಿಸುತ್ತಲೆ ಇಂತಹವರಿಂದ ಎಚ್ಚರಿಕೆಯಿಂದಿರಿ ಎಂಬ ಮೆಸೇಜನ್ನು ಕೊಡುತ್ತಾರೆ.

ಕುಟುಂಬಗಳು ವಾಸ್ತವವಾಗಿ ಚಿದ್ರವಾಗುತ್ತಾ ಬಂದು ಒಬ್ಬರು ಅಥವಾ ಇಬ್ಬರೇ ಇರುವ ಸಣ್ಣ ಕುಟುಂಬಗಳಾಗುತ್ತಿರುವ ಹೊತ್ತಿನಲ್ಲಿ ಕೂಡು ಕುಟುಂಬ ಅದರಲ್ಲಿ ದಂಡಿಯಾಗಿ ಹೆಣ್ಣುಮಕ್ಕಳು ತುಂಬಿರುವ ಫ್ಯಾಮಿಲಿಗಳೆ ನಮ್ಮ ಕಣ್ಮುಂದೆ ಅವರಿದ್ದರೆ ತಾನೆ ಬಣ್ಣ ಬಣ್ಣಗಳ ಉಡಿಗೆ, ತೊಡಿಗೆ, ಸಮಸ್ಯೆಗಳ ಸುರಿಮಳೆ ಅತ್ತೆ-ಸೊಸೆ ಜಗಳ ನಾದಿನಿಯರ ಕಾಟ, ವರದಕ್ಷಿಣೆ ಕಿರುಕುಳ, ಅತ್ತಿಗೆಯರ ನಯವಂಚನೆ ದಿನಕ್ಕೊಂದು ಗೇಮ್ ಪ್ಲಾನ್, ಕಂಸನಂತಹ ಸೋದರ ಮಾವನ ಹಿಂಸೆ, ಜತೆಗೆ ಒಂದಿಷ್ಟು ಕಿಪ್‌ನ್ಯಾಸ್‌ಗಳು, ಕೊಲೆಗಳು, ಆತ್ಮಹತ್ಯೆಗಳು ಆಸ್ಪತ್ರೆ ಪೋಲಿಸ್ ಸ್ಟೇಷನ್ ಸೀರಿಯಲ್‌ನ ಸೆಟ್‌ಸೀನಿಗಳು (Stock shots) ಸಂಕಟ ಬಂದಾಗ ವೆಂಕಟರಮಣವಾದ್ದರಿಂದ ದೇವರ ಮನೆ, ದೇವರ ಗುಡಿ ಹರಕೆ, ಕಾಡಿಸಂ, ರಿಯಲ್ ಎಸ್ಟೇಟ್ ಅವರ ಬೋಳುತಲೆ ಗ್ಯಾಂಗ್ ಸೀರಿಯಲ್‌ನಲ್ಲಿ ಗುಟ್ಟು ಕಾಪಾಡುವಿಕೆ ತಂತ್ರ ಬಹಳ ಸ್ವಾರಸ್ಯವಾಗಿರುತ್ತೆ. ಪತ್ತೆದಾರಿ ಕಥೆಗಳಲ್ಲೂ (ತಿರುವಿನಲ್ಲೂ) ಪಾತ್ರಧಾರಿಗಳಿಗೆ ಮಾತ್ರ

ವಿಷಯ ತಿಳಿಯದೆ ಎಲ್ಲಾ ವಿವರವನ್ನು ವೀಕ್ಷಕರಿಗೆ ತಿಳಿಸಿರುತ್ತಾರೆ. ಸೀರಿಯಲ್‌ನ ಒಳ್ಳೆ ಸಂಸ್ಕೃತಿ ಎಂದರೆ ಪ್ರತಿಯೊಂದು ಪಾತ್ರಕ್ಕೂ ಸಣ್ಣ ಸಣ್ಣ ವಿಷಯ/ಘಟನೆ ಬಗ್ಗೆ ದೀರ್ಘವಾಗಿ, ಪ್ರತ್ಯೇಕವಾಗಿ ನಿರ್ದೇಶಕರು ತಿಳಿಸುತ್ತಾರೆ. ಪಾತ್ರಗಳಲ್ಲಿ ನಾಯಕ, ನಾಯಕಿ ಪೋಷಕ ಪಾತ್ರ ಎಂದು ಪಕ್ಷಪಾತ ಮಾಡದೆ ಪ್ರತಿಯೊಬ್ಬ ಕಲಾವಿದರಿಗೂ ಕ್ಲೋಸ್ ಅಪ್ ಶಾಟ್ ಇದ್ದೇ ಇರುತ್ತೆ. ಆದರಲ್ಲಿ ಯಾವ ರಾಜಕೀಯವೂ ಇರೋದಿಲ್ಲ. ಸಣ್ಣ ಪಾತ್ರಗಳಿಗೂ ಎಲ್ಲರಿಗೂ ಕೊಟ್ಟಂತೆ ಅಭಿವ್ಯಕ್ತಿ ತೋರಿಸುವ ವೇಳೆ. ದುಃಖ, ದುಮ್ಮಾನ, ಆಶ್ಚರ್ಯ ಹೆದರಿಕೆ ಇತ್ಯಾದಿ ಭಾವನೆಗಳನ್ನು ಸೆರೆಹಿಡಿಯಲು ಅವಕಾಶ ಇಲ್ಲದಿದ್ದರೆ ಧಾರಾವಾಹಿ ದಾಖಲೆ ಎಪಿಸೋಡ್‌ಗಳತ್ತ ದಾಪುಗಾಲು (ಕ್ಷಮಿಸಿ ಸರಿಯಾದ ಪದವಲ್ಲ) ಹಾಕುವುದಾದರೂ ಹೇಗೆ?

ಹೆಸರಾಂತ ಹಾಸ್ಯ ಸಾಹಿತಿ ಬೀchi ಒಮ್ಮೆ ಸಂಗಪ್ಪ ಶಾಸ್ತ್ರಿ ಎಂಬ ವಿದ್ವಾಂಸರನ್ನು ಪ್ರಶ್ನಿಸಿದ್ದರಂತೆ "ಅಲ್ಲಾ, ಶಾಸ್ತ್ರಿಗಳೆ, ಭಗವದ್ಗೀತೆಯ ಒಂದು ಶ್ಲೋಕದ ಮೇಲೆ ಪ್ರತಿನಿತ್ಯ 2 ಗಂಟೆಗಳ ಕಾಲ ಸತತವಾಗಿ ಮೂರು ತಿಂಗಳು ಉಪನ್ಯಾಸ ಮಾಡಿದರಲ್ಲ ಅಲ್ಲಿ ನೆರೆಯುತ್ತಿದ್ದವರ ಪೈಕಿ ವ್ಯಾಪಾರಿಗಳೇ ಜಾಸ್ತಿ. ನಿಮ್ಮ ಮಾತುಗಳು ಆ ವ್ಯಾಪಾರಿ ಸಮೂಹಕ್ಕೆ ಏನರ್ಥವಾಯಿತು, ಎಲ್ಲಾ ವ್ಯರ್ಥ, ಸಮಯ ಹಾಳಲ್ಲವೆ?"

ಸಂಗಪ್ಪ ಶಾಸ್ತ್ರಿಗಳು "ವ್ಯರ್ಥ ಅನ್ನೊ ಮಾತನ್ನು ವಾಪಸ್ಸು ತೆಗೆ, ಅಷ್ಟೊಂದು ವ್ಯಾಪಾರಿಗಳು ಇಲ್ಲಿ ಎರಡು ಘಂಟೆ ಕಾಲ ಕೂತಿರುತ್ತಿದ್ದರಲ್ಲ ಆದರಿಂದ ಲೋಕೋದ್ಧಾರವಾಗಿದೆ, ಲೋಕೋಪಯೋಗವಾಗಿದೆ. ಇಲ್ಲದಿದ್ದರೆ ಅವರೆಲ್ಲಾ ತಕ್ಕಡಿ ಹಿಡಿದು ಆ ಎರಡು ಘಂಟೆಗೂ ಗಿರಾಕಿಗಳಿಗೆ ಮೋಸ ಮಾಡುತ್ತಿದ್ದರು" ಎಂದು ನಕ್ಕರಂತೆ.

ಈ ಮಾತು ಸೀರಿಯಲ್‌ಗಳಿಗೂ ಅನ್ವಯಿಸೊಲ್ವೆ?

ಲೋಕಕಲ್ಯಾಣಕ್ಕಾಗಿ ಸೀರಿಯಲ್‌ಗಳು!



ಕೊರವಂಜಿಯಿಂದ



# ಸವಿತಿನಿಸುಗಳು ಸವಿನೆನಪಾಗುವ ಮುನ್ನ

**- ವಿ. ಪ್ರಾಣೇಶ್ ರಾವ್**

'ಶ್ರೀ ಶ್ರೀನಿವಾಸ ನಿಲಯ'

ಬಯಲು ಸೀಮೆಯಲ್ಲಿದ್ದರೂ ಮಲೆನಾಡಿನ ಮನೆಯನ್ನು ಹೋಲುವ ಮನೆ, ಈ ಮನೆಯಲ್ಲಿರುವ ಹಿರಿಯರಿಗೆ ಹಬ್ಬ ಹರಿದಿನಗಳೆಂದರೆ ಎಲ್ಲಿಲ್ಲದ ಸಂಭ್ರಮ ಸಡಗರ. ಮೈಸೂರಿನಲ್ಲಿ ದಸರೆ ಸನ್ನಿಹಿತವಾದಾಗ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಅಷ್ಟು ಸಂಭ್ರಮಿಸುತ್ತಾರೊ ಇಲ್ಲವೊ ಮನೆಯ ಯಜಮಾನಿಗಂತೂ ಇನ್ನಿಲ್ಲದ ಉತ್ಸಾಹ. ಉಲ್ಲಾಸ. ಮನೆಯ ಮುಂಬಾಗಿಲಿಗೆ ಕಟ್ಟುವ ಹಸಿರು ತೋರಣದಿಂದ ಹಿಡಿದು ದೇವರ ಮನೆಯಲ್ಲಿ ಸಾಲಿಗ್ರಾಮದ ಮೇಲೆ ಬೀಳುವ ತುಳಸೀದಳದವರೆಗೂ ಎಲ್ಲವೂ ಅಚ್ಚುಕಟ್ಟಾಗಿ ಆಗದಿದ್ದರೆ ಅವಳಿಗೆ ತೀವ್ರ ಅಸಮಾಧಾನ.

ಯುಗಾದಿ ವರ್ಷಾವಧಿ ಹಬ್ಬ, ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರು ತನ್ನ ಅಕ್ಕತಂಗಿಯರು ಹಬ್ಬಕ್ಕೆ ಬಂದು ನೆರೆದಿದ್ದಾರೆ. ಅವಳಿಗೆ ಬಾಯಿ ಹರಿದು ಹೋಗುವಷ್ಟು ಹಿರಿ ಹಿರಿ ಹಿಗ್ಗು. ಹಬ್ಬಕ್ಕೆ ಒಂದೆರಡು ದಿನ ಮುಂಚೆ ಹಬ್ಬದ ಏರ್ಪಾಟು ಕುರಿತು ಮಾತನಾಡಲು ಮನೆಮಂದಿಯೆಲ್ಲ ಸಭೆ ಸೇರಿದ್ದಾರೆ.

ಹೋಳಿಗೆ ಹೊರಗಿಂತ ತರುವುದೊ ಮನೆಯಲ್ಲಿ ಮಾಡುವುದೊ ಎಂಬ ಮಾತು ಬಂದಾಗ, 'ಹೋಲಿಗೆ ಮನೇಲಿ ಮಾತಾರಾ?!' ಅಂತ ತನ್ನ ಬಾಲ ಭಾಷೆಯಲ್ಲಿ ಕೇಳಿತು ಒಂದು ಚಿಲ್ಟಾರಿ. ಅದಕ್ಕೇನೋ ಆಶ್ಚರ್ಯ. ಏಕೆಮದರೆ ಯಾವಾಗಲೂ ವೆಂಕಮ್ಮನ ಮನೆಯಿಂದಲೋ ಇಲ್ಲ ಬೇಕರಿಯಿಂದಲೋ ಹೋಲಿಗೆ ಮುಂತಾದ ಸಿಹಿ ತಿನಿಸು ತರಿಸುವುದು ಅವರ ಮನೆಯಲ್ಲಿ ವಾಡಿಕೆ. ಎಲಾ ಇವನ ಇವ ಚೋಟುದ್ದ ಇದ್ದಾನೆ ನಮಗೆ ಹೋಳಿಗೆ ಮಾಡಲು ಬರಲ್ಲ ಅಂತಾನಲ್ಲ ಅಂತ ಎಲ್ಲರಿಗೂ ಅಚ್ಚರಿ. 'ನಂಗೆ ಫಸ್ಟ್‌ಕ್ಲಾಸ್ ಹೋಳಿಗೆ ಮಾಡೊಕೆ ಬರುತ್ತೆ. ನಿಮಗೆ ಪುಟ್ಟ ಪುಟ್ಟ ಹೋಳಿಗೆ ಮಾಡಿಕೊಡ್ಲಾ, ಬಿಸಿ ಹೋಲಿಗೆಗೆ ತುಪ್ಪ ಹಾಕ್ಕೊಂಡು ತಿನ್ತೀಯಾ...?' ಅವನ ದೊಮ್ಮ ಉರುಫ್ ದೊಡ್ಡಮ್ಮ ಲಲ್ಲೆಗರೆದಳು.

ಮುಂಬಯಿಯಿಂದ ಬಂದಿದ್ದ ಮೊಮ್ಮಗನೊಬ್ಬ ನೊಡಲು ಥೇಟ್ ಕ್ರಿಕೆಟ್ ಪಟು ಧೋನಿ ಥರ ಇದ್ದ. ಅವನು ಧರಿಸಿದದ ಟೀ-ಶರ್ಟ್ ಮೇಲೆ 'ಎಜ್ಯುಕೇಷನ್ ಹ್ಯಾಸ್ ಸ್ಪಾಯಿಲ್ಡ್‌ಮೀ' ಅನ್ನೋ ಅಕ್ಷರಗಳಿದ್ದವು. ಮೂಲೆಯ ಸೋಫಾದಲ್ಲಿ ಚ್ಯುಯಿಂಗ್ ಗಮ್ ಜಗಿಯುತ್ತ ಆಲಸಿಯಾಗಿ ಬಿದ್ದುಕೊಂಡಿದ್ದವನು ಥಟ್ಟನೆ ಎದ್ದು ಕುಳಿತು, 'ಹೀಗೆ ಮಾಡಿದರೆ ಹೇಗೆ?! ಈ

ಪೂರಣ್ ಪೋಳಿ ತಿಂದು ತಿಂದು ವಾಕರಿಕೆ ಬಂದಿದೆ. ಹಾಸ್ಟೆಲ್ಲೂ ಫೀಸ್ಟ್ ಇದೆ ಅಂದರೆ ಸಾಕು ಅದೇ ಪೂರಣ್ ಪೋಳಿ ಶ್ರೀಖಂಡ... ಇಲ್ಲಿ ಬಂದರೆ ಅದೇ ತಾತನ ಕಾಲದ ಒಬ್ಬಟ್ಟು ಹೋಳಿಗೆ ಪಾಯಸ ಚಿತ್ರಾನ್ನ. ನಿಮಗೆ ಬೇರೆ ಮಾಡ್ಲಿಕ್ಕೆ ಬರಲ್ಲೇನು. ಈ ಪಾಯಸ ಆಂಬೊಡೆ ಅಂತ ಹಾಳು ಮೂಳ ತಿಂದು ಆರೋಗ್ಯ ಕೆಡಿಸಿಕೊಳ್ಳೋಕಿಂತ ಈಸಲ ನಾನು ಒಳ್ಳೇ ಪಿಜ್ಜಾ ತರ್ತೀನಿ. ಜೊತೆಗೆ ಒಂದಷ್ಟು ನೂಡಲ್ಸ್ ಪರೋಟ ಹಾಗೆ ಕುಡಿಯಲು ಕೋಕ್ ಇಲ್ಲ ಕಾಪಿಚೀನೊ ಏನಂತೀ' ಅಂದ. ಅವನ ಮಾತು ಬೆಳಗಾವಿ ನಗರಪಾಲಿಕೆಯಲ್ಲಿ ಎಂ.ಈ.ಎಸ್. ಸದಸ್ಯನೊಬ್ಬ ಮಾತನಾಡಿದಂತಿತ್ತು.

'ಇದೇನು ಕುಡುಕರು ಮಾಡೊ ಪಾರ್ಟಿ ಕೆಟ್ಟುಹೋಯಿತೇನೋ ಬದ್ಮಾಶ್. ನಾಳೆ ದೊಡ್ಡಹಬ್ಬ ಬಾಯಿಗೆ ಬಂದಂತೆ ಮಾತಾಡ್ತಿಯಲ್ಲ ನಾಚಿಕೆಯಾಗಲ್ವ' ದೊಡ್ಡಪ್ಪ ರೇಗಿದರು.

'ಎಂಥಾ ಕಾಲ ಬಂತಪ್ಪ ರಾಮರಾಮ. ಇದೆಲ್ಲ ನೋಡೋ ಹಾಗಾಯಿತಲ್ಲ... ಅಂತ ಅಜ್ಜ ತಮ್ಮ ಕಿವಿ ಮುಚ್ಚಿಕೊಂಡರು. ನಾಳೆ ನಮ್ಮ ಕಾಲದ ತಿಂಡಿ ತಿನಿಸುಗಳು ಯಾವುದೂ ಇರದೆ ಲಾಡು ಚಿರೋಟಿ ಚಕ್ಕುಲಿ ತಂಬಿಟ್ಟು ಅನ್ನೋದೆಲ್ಲ ಫೋಟೋದಲ್ಲೊ ಇಲ್ಲ ಚೆನ್ನಪಟ್ಟಣ ಕಿನ್ನಾಳದ ಬಣ್ಣ ಬಣ್ಣದ ಮಾಡೆಲ್‌ಗಳಲ್ಲೊ ನೋಡಬೇಕಾಗುತ್ತೊ ಏನೋ...' ಅಂತ ತುಂಬ ಬೇಸರಿಸಿದರು.

'ಈ ಕಾಮನ್ ಹಾಸ್ಟೆಲ್ ಸೇರೊ ಬದಲು ಕಮ್ಯುನಿಟಿ ಹಾಸ್ಟೆಲ್ ಸೇರಿಕೊ. ಅಲ್ಲಿ ಊಟ ತಿಂಡಿ ಎಲ್ಲದರಾಗೂ ಸ್ವಲ್ಪನಾದರೂ ಆಚಾರ ವಿಚಾರ ಕಲಿಸ್ತಾರೆ ಅಂತ ಬಡಕೊಂಡೆ. ಈಗ ನೋಡು ಹೇಗಾಗಿದೆ ಪರಿಸ್ಥಿತಿ. ನಮ್ಮ ಊಟ ತಿಂಡಿ ಸಂಪ್ರದಾಯ ಅಂದ್ರೆ ನಿಂಗೆ ಎಳ್ಳಷ್ಟೂ ಇಷ್ಟ ಇಲ್ಲ. ಒಟ್ಟಿನಲ್ಲಿ ನಿನ್ನ ಬೊಂಬಾಯಿಗೆ ಓದಲಿಕ್ಕೆ ಅಂತ ಕಳಿಸಿದ್ದೇ ತಪ್ಪಾಗಿದೆ. ಶುದ್ಧ ಅಯೋಗ್ಯನ್ನ ತಂದು...' ಅಂತ ದೊಡ್ಡಪ್ಪ ಹಣೆ ಹಣೆ ಚಚ್ಚಿಕೊಂಡರು.

ಲಂಗ ಚೋಲಿ ಹಾಕಿಕೊಂಡು ಲಕ್ಷಣವಾಗಿದ್ದ ಮೊಮ್ಮಗಳು 'ನಂಗೆ ನೂಡಲ್ಸ್ ಅಂದರೆ ತುಂಬ ಇಷ್ಟ ಗೋಡಂಬಿ ದ್ರಾಕ್ಷಿ ಹಾಕಿ ಶಾವಿಗೆ ಪಾಯಸ ಮಾಡಿ. ನೂಡಲ್ಸ್ ತಿಂದ ಹಾಗಾಗುತ್ತೆ....' ಅಂದಳು. ಟ್ರೈಸಿಕಲ್ ತಳ್ಳುತ್ತ ಅಲ್ಲೆ ಹಾಲಿನಲ್ಲಿ ಆಟವಾಡುತ್ತಿದ್ದ ಎರಡು ಚಿಳ್ಳೆಪಿಳ್ಳೆಗಳು ನಂಗೆ ಗೋಡಂಬಿ ನಂಗೆ ದ್ರಾಕ್ಷಿ ಅಂತ ಕವಕವ ಮಾಡಹತ್ತಿದವು.

ಅಜ್ಜಿಗೆ ಒಂದೇ ಬೇಸರ. ಹೋಳಿಗೆ ಇಲ್ಲ ಕರಿಗಡುಬು. ಶ್ಯಾವಿಗೆ ಪಾಯಸದ ಜೊತೆಗೆ ಆಂಬೊಡೆ ಚಿತ್ರಾನ್ನ ಕೋಸಂಬರಿಗಳನ್ನ ಮಾಡಿದ್ದರೆ ಹಬ್ಬ. ಇದನ್ನೆಲ್ಲ ಮಾಡಲು ಯಾರಿಗೆ ಸಮಯ ವ್ಯವಧಾನ ಇದೆ. ಅಷ್ಟು ಬೇಕಂದ್ರೆ ಯಾರೊ ಮಾಡಿದ್ದನ್ನು ಹೊರಗಿನಿಂದ ತರಿಸಿ ಕೈ ತೊಳಕಂತಾರೆ. ನಮ್ಮ ಕಾಲದಲ್ಲಾದರೆ... ಅಂತ ಏನೇನೊ ಪೇಚಾಡಿಕೊಳ್ಳುತ್ತ ಯಾರು ಏನಾದರೂ ಮಾಡಿಕೊಳ್ಳಿ ಅಂತ ಬೇಸತ್ತು ಸಭೆ ಬರಕಾಸ್ತು ಮಾಡಿದರು. ಹಾಗೆ ತಾವು ಒಂದು ದಿನದ ಮಟ್ಟಿಗೆ ಮಗಳ ಮನೆಗೆ ಹೋಗಿ ಬರುವುದಾಗಿ ತಿಳಿಸಿ ಸಂಜೆ ಸಿಟಿ ಬಸ್ಸಿಗೆ ಹೊರಟುಹೋದರು. ಹಬ್ಬದ ಹಿಂದಿನ ದಿನ ಮನೆಗೆ ಬಂದು ಮಲಗಿದ್ದಾರೆ. ಬೆಳಿಗ್ಗೆ ಕಿಟಾರನೆ ಕಿರುಚಿ ನಿದ್ದೆಯಿಂದೆದ್ದು ಕುಳಿತರು. ಅವರಿಗೆ ಯಾರೊ ಬಲವಂತದಿಂದ ಪಿಜ್ಜಾ ತಿನ್ನಿಸುತ್ತಿರುವಂತೆ, ಆ ತಿಂಡಿಯ ಜಿಗುಟಿಗೆ ಅವರ ಹಲ್ಲೆಲ್ಲ ಈಚೆ ಕಳಚಿ ಬಂದಂತೆ ಕನಸಾಯಿತಂತೆ. 'ಅಯ್ಯೋ ಅದು ಕನಸಜ್ಜಿ. ಇಲ್ಲಿ ನೋಡಿ ಬನ್ನಿ...' ಅಂತ ಮಕ್ಕಳು ಮೊಮ್ಮಕ್ಕಳು ಕೈಹಿಡಿದು ಕರೆತಂದು ತೋರುತ್ತಾರೆ. ಮನೆಯ ಸಂಸ್ಕೃತಿ ಸಂಭ್ರಮಕ್ಕೆ ಅಜ್ಜಿ

ನಿಬ್ಬೆರಗಾಗುತ್ತಾರೆ. ಮಾವಿನ ತೋರಣವೇನು, ಹೂಮಾಲೆಗಳೇನು. ರಂಗೋಲಿಯಿಂದ ರಂಗನಾಥನವರೆಗೆ ಎಲ್ಲವೂ ಸಂಸ್ಕೃತ ಸುಸಂಸ್ಕೃತ. ಅದಾಗಲೆ ಆಚಾರ್ರು ದೇವರ ಮನೆಯಲ್ಲಿ ಪೂಜೆ ಸಾಂಗವಾಗಿ ನೆರವೇರಿಸುತ್ತಿದ್ದಾರೆ. ಪೂಜೆ ಘಂಟಾರವ ಮನೆಯಲ್ಲೆಲ್ಲ ತುಂಬಿಕೊಳ್ಳುತ್ತಿದೆ.

ಊಟದ ವೇಳೆ ಕುಡಿಬಾಳೆ ಎಲೆಯ ಮುಂದೆ ರಂಗೋಲಿ ಎಳೆದು ಸೊಸೆಯರು ಪಾಂಗಿತವಾಗಿ ಉಪ್ಪಿನಿಂದ ತುಪ್ಪದವರೆಗೆ ಎಲ್ಲ ಸವಿತಿನಿಸು ಮೇಲೋಗರಗಳನ್ನು ಬಡಿಸಿ ಅಲಂಕರಿಸಿದ ಮೇಲೆ ಆಚಾರ್ರು ಎಲ್ಲರಿಗೂ ತೀರ್ಥ ಪ್ರಸಾದ ವಿತರಿಸಿದರು. ಅವರು ಮಕ್ಕಳನ್ನು ಕುರಿತು ಆ ದಿನ ಬೇವು ಬೆಲ್ಲ ತಿನ್ನುವುದರ ಮಹತ್ವ ತಿಳಿಸಿದರು. ಆಗ ಅಜ್ಜಿಯಿದ್ದು 'ನೋಡಿ ಸಂಪ್ರದಾಯದ ಅಡಿಗೆ ಆತಿಥ್ಯವನ್ನು ಹಿಂದಿನಿಂದಲೂ ಮಾಡಿಕೊಂಡು ಬರುತ್ತಿರುವ ಈ ತಿಂಡಿತೀರ್ಥಗಳಲ್ಲಿರುವ ಸವಿರುಚಿ ನೈಪುಣ್ಯತೆ ಬೇರೆಲ್ಲಿ ಬರಲು ಸಾಧ್ಯ. ಈ ಹಸಿರೆಲೆಯ ಮೇಲೆ ಬಡಿಸಿರುವ ಪದಾರ್ಥಗಳೇ ಸಾಕು. ಹೇಗೆ ಕಣ್ಣು ತುಂಬುತ್ತವೆ. ಇರಲಿ, ಎಲ್ಲರೂ ಹಸಿದಿದ್ದೀರಿ. ಆಚಾರ್ರೆ ಮೊದಲು ನೀವು 'ಗೋವಿಂದ' ಅಂದುಬಿಡ್ರಿ. ನಾವು ಊಟ ಶುರುಮಾಡ್ತೇವೆ' ಅಂತ ಅಂದರು. ಹಾಸ್ಯ ಪ್ರಿಯರಾದ ಆಚಾರ್ರು 'ನಾನು ಗೋವಿಂದಾ ಅಂದುಬಿಟ್ಟರೆ ನೀವು ಯಾರೂ ಊಟ ಮಾಡೋಹಾಗಿಲ್ಲ' ಎಂದರು. ಎಲ್ಲರೂ ಘೊಳ್ಳನೆ ನಗತೊಡಗಿದರು. ಮನೆಯ ಯಜಮಾನರು ನೀರು ತುಂಬಿದ ಬೆಳ್ಳಿ ಲೋಟವನ್ನು ಹಿಡಿದು 'ಕೃಷ್ಣಾರ್ಪಣಮಸ್ತು' ಅಂತ ಹೇಳಿ ಅಪ್ಪಣೆ ಕೊಡಿಸಿದ ಮೇಲೆ ಎಲ್ಲರೂ ಒಕ್ಕೊರಲಿನಿಂದ 'ಲಕ್ಷ್ಮೀನಾರಾಯಣ ಗೋವಿಂದಾ ಗೋವಿಂದಾ' ಎಂದು ಗೋವಿಂದ ನಾಮಸ್ಮರಣೆ ಮಾಡುವ ಮೂಲಕ ಊಟ ಶುರು ಮಾಡಿದರು.





# ಗಂಧದ ಲಕ್ಷ್ಮಿಯ ಹಿಂದೆ

- ಸಾಯಿಲಕ್ಷ್ಮಿ.ಎಸ್

ಮೈಸೂರು ಗೆಳತಿ ರಮಾ ಮೊಬೈಲ್‌ನಲ್ಲಿ ಉಲಿದರು 'ತಿರುಪತಿಯ ಆಸ್ಥಾನ ಮಂಟಪದಲ್ಲಿ ಅರ್ಚನಾ ಕಚೇರಿ ಇದೆ. ಹೊರಟಿದೀವಿ ನೀವು ಸೇರಕೋತೀರಾ?'

ಮನೆದೇವರ ದರುಶನ ಇಂತಹ ಆಹ್ವಾನ ದೊರೆಯುವುದು ಯೋಗಾಯೋಗವೇ? ಸುಮ್ಮನಿರಲಾದೀತೇ? ನಮ್ಮಿಡೀ ಕುಟುಂಬ ತಿಮ್ಮಪ್ಪನ ಬ್ಯಾಂಡ್ ಕಟ್ಟಿಸಿಕೊಂಡು ಸಂದರ್ಶನಕ್ಕೆ ವೇಳೆ ನಿಗದಿಪಡಿಸಿಕೊಂಡು ಏಳು ಮಲೆ ಪ್ರಭುವನ್ನು ನೋಡಲು ಹೊರಟಾಯಿತು. ದಾರಿಯುದ್ದಕ್ಕೂ ರಮಾ ಫೋನ್ ಮೂಲಕ ತಾನಾಗಲೇ ತಿರುಪತಿ ತಲುಪಿದ್ದು ಉಳಿದುಕೊಂಡಿರುವ ಸ್ಥಳದ ವಿವರ ನೀಡಿ 'ಹೇಗಿದ್ದರೂ ನಿಮಗೆ ರೂಂ ಸಿಕ್ಕಿಲ್ಲ, ನಮ್ಮದು ದೊಡ್ಡದಿದೆ. ಇಲ್ಲೇ ಉಳಕೋಬಹುದು' ಎಂದು ಆಮಂತ್ರಿಸಿದ್ದು ಆಯಿತು. ಇನ್ನು ಯಜಮಾನರು ಸ್ವತಂತ್ರ ಪಕ್ಷದ ಪಕ್ಷಿ. ಅಂತೂ ನಾವೊಂದು ಬೇರೆ ಬಿಡಾರ ಗೊತ್ತು ಮಾಡಿಕೊಂಡೆವು.

ಕಳೆದ ಬಾರಿ ಹೀಗೆ ತಿರುಪತಿಗೆ ಹೊರಟಾಗ ಸಹೋದ್ಯೋಗಿ ಸುಬ್ರಾಯಿ ಒಂದು ಅಹವಾಲು ಮುಂದಿಟ್ಟಿದ್ದರು 'ಮೇಡಂ ತಿರುಪತಿಯಲ್ಲಿ ಸಿಗೋ ಗಂಧದ ಲಕ್ಷ್ಮಿ ಬಹಳ ಶ್ರೇಷ್ಠವಂತೆ ತಂದು ಮನೇಲಿ ಪೂಜೆ ಮಾಡಿದರೆ ಒಳ್ಳೇದು ಅಂತಾರೆ ನನಗೊಂದು ಹಿಡಕೊಂಡು ಬನ್ನಿ.'

ಅವರು ಒಂದು ಲಕ್ಷ್ಮಿ ಕೇಳಿದ್ದರೆ ನಾನು ಎರಡಕ್ಕಾಗಿ ರಸ್ತೆ, ಗಲ್ಲಿ, ಬೀದಿ ಎಲ್ಲಾ ಜಾಲಾಡಿದ್ದೆ. ಎಲ್ಲಿ ಕೇಳಿದರೂ ಬಂದ ಉತ್ತರ 'ಲೇದು' ಬರಿಗೈಲಿ ಮರಳಿ ಸುಬ್ರಾಯರಿಗೆ ನಿವೇದಿಸಿದ್ದೆ ನನ್ನ ಪ್ರಯತ್ನದ ವಿಫಲತೆ.

ಆದರೆ ನನ್ನೊಳಗೊಂದು ಹಟ ಹುಟ್ಟಿತ್ತು. ಗಂಧದಲ್ಲಿ ಹುಟ್ಟು ಪಡೆದ ಈ ಲಕ್ಷ್ಮಿಯನ್ನು ನಮ್ಮ ದೇವರ ಮನೆ ತುಂಬಿಸಿಕೊಳ್ಳಬೇಕೆಂದು. ಹಾಗಾಗಿ ಈ ಬಾರಿ ಮಿತ್ರೆ ರಮಾ ಕರೆದಾಗ ಮೊದಲು ಮನದಲ್ಲಿ ಸುಳಿದಿದ್ದು ಗಂಧದ ಲಕ್ಷ್ಮಿ ಅವಳನ್ನು ಹೊಂದುವ ಅಪರಿಮಿತ ಬಯಕೆ.

ಹಿಂದೊಮ್ಮೆ ಒಬ್ಬ ಹಿರಿಯ ಸರ್ಕಾರಿ ಅಧಿಕಾರಿ ಮಿತ್ರರ ಭೇಟಿಯಲ್ಲಿ ಅವರ ತಿರುಪತಿಯ ನಂಟು ಬಲ್ಲ ಈ ಗಂಧದ ಲಕ್ಷ್ಮಿ ಪ್ರಸ್ತಾಪ ಮಾಡಿದ್ದೆ. ಅವರು ಆ ಕೂಡಲೇ ತಿರುಮಲೆಯ ಪ್ರಧಾನ ಅರ್ಚಕರಿಗೆ ಫೋನ್ ಮಾಡಿ 'ನನಗೊಂದು ಗಂಧದ ಲಕ್ಷ್ಮಿ ನೀಡಬೇಕೆಂದು

ವಿನಂತಿಸಿಕೊಂಡಿದ್ದರು' ನನ್ನನ್ನು ಕಳಿಸಿಕೊಡಬೇಕೆಂದು ಲಕ್ಷ್ಮಿ ಕೊಡುವುದಾಗಿ ಆ ಅರ್ಚಕರು ಮಾತುಕೊಟ್ಟಿದ್ದರು. ಅದು ಈ ಸಂದರ್ಭದಲ್ಲಿ ನೆನಪಾಯಿತು. ಆದರೆ ಆ ಅರ್ಚಕರ ಹೆಸರು ಉತ್ತರಾರ್ಧ 'ದೀಕ್ಷಿತ್' ಮಾತ್ರ ಜ್ಞಾಪಕದಲ್ಲಿದ್ದು, ಪೂರ್ವಾರ್ಧದ ಬಗ್ಗೆ ಗೊಂದಲವಿತ್ತು. ಈ ಮಾತುಕತೆ ನಡೆದು ಸುಮಾರು ತಿಂಗಳು ಕಳೆದ ಮೇಲೆ 'ತಿರುಪತಿ ಯಾತ್ರೆ' ಲಭಿಸಿದೆ. ಅವರಿಗೆ ನೆನಪಿರಬೇಕಲ್ಲ ನನಗಂತೂ ಪೂರ್ತಿ ವಿಷ್ಣುಪತ್ನಿಯ ಗೀಳು ಹಿಡಿದಿತ್ತು. ರಮಾ ಜೊತೆಯಾಗಿ, ಯಜಮಾನರ ಕಣ್ಣು ತಪ್ಪಿಸಿ, ಸಮಯ ಸಾಧಿಸಿ, ಈ ಗಂಧದ ಲಕ್ಷ್ಮಿಯ ಕೈವಶ ಮಾಡಿಕೊಳ್ಳಬೇಕೆಂಬ ತೀವ್ರ ಬಯಕೆ ಉಂಟಾಯಿತು.

ಮಾರನೆಯ ದಿನದ ಬೆಳಗಿನ ಜಾವಕ್ಕೆ ನಾವು ಅನಂತ ಅರ್ಚನ ಸೇವೆಗೆ ನಾಲ್ಕು ಟಿಕೇಟ್ ಪಡೆದಿದ್ದೆವು. ಪುತ್ರಿಯರಿಬ್ಬರು ಅಷ್ಟು ಬೆಳಿಗ್ಗೆ ನಮಗೆ ಏಳೋಕೆ ಆಗೋಲ್ಲ, ನಾವು ಹನ್ನೊಂದು ಗಂಟೆ ದರ್ಶನ ಮಾಡ್ತೀವಿ. ನೀವಿಬ್ಬರು ಬೀಗ ಹಾಕ್ಕೊಂಡು ಹೋಗಿ' ಎಂದು ಮುಸುಕೆಳೆದೇಬಿಟ್ಟರು. ಎಷ್ಟೇ ಕಚ್ಚಾಡಿದರೂ, ಈ ವಿಷಯದಲ್ಲಿ ಅವರಿಬ್ಬರ ಅನ್ಯೋನ್ಯ, ಒಮ್ಮತ ಮೆಚ್ಚಬೇಕಾದ್ದೇ.

'ಎರಡು ಟಿಕೆಟ್ ಅನ್ಯಾಯ ದಂಡ ಆಗತ್ತೆ, ರಮಾ ದಂಪತಿಗಳ್ನೇ ಕರಕೊಂಡು ಹೋಗೋಣ' ಎಂದೆ. ಯಜಮಾನರಿಗೂ ಖುಷಿಯೇ, ನಮ್ಮ ಎರಡು ಜೋಡಿ, ಜೊತೆಯಾಗಿ ವೆಂಕಟರಮಣನಿಗೆ ಶುಭೋದಯ ಹೇಳಿ ಬಂದೆವು. ಇನ್ನು ಹನ್ನೊದರ ಶ್ರೀನಿವಾಸ ಕಾರ್ಯಕ್ರಮಕ್ಕೆ ಮಲಗೆದ್ದು ತಯಾರಾದ ಮಕ್ಕಳಿಬ್ಬರು ಹಾಗೂ ರಮಾಪುತ್ರಿ ಅರ್ಚನಾ ಈ ಮೂವರನ್ನು ಯಜಮಾನರ ಸಾರಥ್ಯದಲ್ಲಿ ಕ್ಯೂ ತಲುಪಿಸಿ ನಾನು, ರಮಾ ಹಾಗೇ ತಿರುಗಾಡುವ ಅಪೇಕ್ಷೆಯಿಂದ ಹೊರಟೆವು. ಇನ್ನು ಮಲಗಿ ವಿಶ್ರಮಿಸುತ್ತಿದ್ದ ಪತಿಗೆ ರಮಾ ಸೆರೆವಾಸ ಕಲ್ಪಿಸಿ; ಬೀಗ ಹಾಕಿ ಬಂದಿದ್ದವರು ಸುತ್ತಿಗೆ ಅಣಿಯಾದರು. ನನ್ನ ಗಂಧದ ಲಕ್ಷ್ಮಿಯ ಪತ್ತೇದಾರಿ ಕೆಲಸಕ್ಕೆ ರಮಾ ಸಂಪೂರ್ಣ ಬೆಂಬಲ ನೀಡಿದ್ದೇ ನನಗೆ ಪ್ರೇರಣೆ ಎಲ್ಲ ಬಲ್ಲ ಮೂಲಗಳಿಂದ ಅರ್ಚಕ ದೀಕ್ಷಿತರನ್ನು ಕಾಣಲು ಶೋಧಿಸಿ, ಶೋಧಿಸಿ ಸೋತೆವು. ಕಡೆಗೊಬ್ಬರು ಅರ್ಚಕರ ವಸತಿ ಸಮುಚ್ಚಯದಲ್ಲಿ ದೀಕ್ಷಿತರು ಅಥವಾ ಲಕ್ಷ್ಮಿ ಅಥವಾ ಇಬ್ಬರೂ ಸಿಗುವ ಸಾಧ್ಯತೆ ಬಲವಾಗಿದೆ ಎಂದು ದೃಢಪಡಿಸಿದ ನಂತರ ನಾವು ಗೆಳತಿಯರೀರ್ವರು ವರಾಹಸ್ವಾಮಿ ದೇವಾಲಯದ ಎದುರಿನ ಪೂಜಾರಿಗಳ ತಂಗುದಾಣ ತಲುಪಿದೆವು. ಅಲ್ಲಿ ಯಾವ ದೀಕ್ಷಿತರು? ಪೂರ್ತಿ ಹೆಸರೇನು? ಎಂಬುದೇ ಎಲ್ಲರ ಪ್ರಶ್ನೆ. ಅವರನ್ನು ಹುಡುಕಿ ಬಂದ ಕಾರಣ ಕೇಳಿದಾಗ ಗಂಧದ ಲಕ್ಷ್ಮಿಯ ಜಾಡು, ಬೀಡು ಹಿಡಿದು ಬಂದಿದ್ದು ತಿಳಿಸಲೇಬೇಕಾಯಿತು. ಒಬ್ಬ ಮಧ್ಯ ವಯಸ್ಸಿನ ಮೇಲಂಗಿರಹಿತ ಪಂಚೆಧಾರಿ 'ಗಂಧದ ಲಕ್ಷ್ಮಿ ಎಲ್ಲೂ ಸಿಗೊಲ್ಲ, ಕೋರ್ಟ್ ಆದೇಶ ಆಗಿದೆ. ಗಂಧವನ್ನು ಒಂದು ಹೊತ್ತಾದ ದಿನ ವೆಂಕಟರಮಣನ ವಕ್ಷಸ್ಥಳಕ್ಕೆ ಹಚ್ಚಿ ಅಲ್ಲಿರುವ ಲಕ್ಷ್ಮಿಯ ಮುದ್ರೆ ಗಂಧದಲ್ಲಿ ತೆಗೆಯುತ್ತಾರೆ. ಅದರ ಮಾರಾಟ ನಿಷೇದವಾಗಿದೆ' ಎಂದು ಲಕ್ಷ್ಮಿ ದೊರೆಯುವ ಅಭಾವವನ್ನು ಮನದಟ್ಟಾಗುವಂತೆ ಅವಳ ಹುಚ್ಚು ಹೆಚ್ಚಾಗುವಂತೆ ಮಾಡಿಸಿದ – 'ಇಂತಾ ಗಂಧದ ಲಕ್ಷ್ಮಿ

ನಮ್ಮ ಮನೇಲಿ ಹೇಗಾದರೂ ಇರಿಸಿ ಪೂಜೆ ಸ್ವೀಕರಿಸಬೇಕು' ಎಂಬ ಗೀಳು ಗಾಢವಾಯಿತು. ದಿಟ್ಟವಾಗಿ ಕೇಳಿಯೇಬಿಟ್ಟೆ 'ನಾವು ಬೆಂಗಳೂರಿನಿಂದ ಬಂದಿದೀವಿ. ಈ ಲಕ್ಷ್ಮಿ ಸಿಗೋದು ಬಹಳ ಅಪರೂಪ ಅಂತಾ ಕೇಳಿದೀವಿ. ಹೇಗಾದರೂ ಮಾಡಿ ನಮಗೆ ಕೊಡಿ' ನಮ್ಮ ಕಳವಳದ ಮುಖ ಕಂಡ ಅವ 'ಎಷ್ಟು ಬೇಕು?' ಎನ್ನೋದೇ. ನನಗೆ ಆ ತಕ್ಷಣ ನೆಂಟರು ಇಷ್ಟರು ಎಲ್ಲರೂ ಕಣ್ಣೆದುರು ಬಂದಂತಾಗಿ ಈ ಭಾಗ್ಯದ ಲಕ್ಷ್ಮಿ ಅವರ ಮನೆಗಳಿಗೆಲ್ಲಾ ಬರಲಿ ಎಂಬ ಅಪೇಕ್ಷೆಯಿಂದ 'ಒಂದು ಐದಾರು ಇದ್ರೂ ಬೇಕು' ಹೇಗಿರುತ್ತೋ ತೋರಿಸ್ತೀರಾ?' ಎಂದೆ. ಅದಕ್ಕವ, ಒಳಹೋಗಿ, ಒಂದು ಅರಿಶಿನ ಬಣ್ಣದ ಕೊಬ್ಬರಿ ಚೂರನ್ನು ಹೋಲುವ ತುಂಡನ್ನು ಹಿಡಿದು ಬಂದ. 'ಇದೇ ಗಂಧದ ಲಕ್ಷ್ಮಿ' ಎಂದು ಕಣ್ಣ ಮುಂದೆ ಹಿಡಿದ. ಆ ತುಂಡಲ್ಲಿ ಲಕ್ಷ್ಮಿಯ ಯಾವ ಕುರುಹು ಕಾಣಲಿಲ್ಲ. ಸೋಲು ತೋರಿಸಿಕೊಳ್ಳಬಾರದೆಂದು 'ಇದಕ್ಕೆ ಎಷ್ಟು?' ಎಂದೆ 'ಒಂದು ಸಾವಿರ ರೂಪಾಯಿ, ನೀವು ನೋಡಾಯಿತಲ್ಲ ಎಷ್ಟು ತರಲಿ?' ಎಂದನವ.

'ಆರಕ್ಕೆ ಆರು ಸಾವಿರ' ಎಂದು ಅವನು ಮನದಲ್ಲೇ ಮಂಡಿಗೆ ತಿನ್ನುತ್ತಿದ್ದಾಗ ನಾನು 'ರಸೀತಿ ಕೊಡ್ತೀರಾ?' ಎಂದು ಅವನನ್ನು ಕಹಿ ವಾಸ್ತವಕ್ಕೆ ಕರೆತಂದೆ. ತಕ್ಷಣ ಸಾವರಿಸಿಕೊಂಡವ 'ರಸೀತೀನಾ, ಇಲ್ಲಾ ಇಲ್ಲಾ ಅದು ಕೊಡೋಕೆ ಆಗೊಲ್ಲ. ನೂರು ರೂ ಲಕ್ಷ್ಮಿ ಬೆಲೆ, ಉಳಿದ 900 ರೂ ತಿಮ್ಮಪ್ಪನ ಹುಂಡಿಗೆ ಕಾಣಿಕೆ ಹಾಕ್ತೀವಿ' ಎಂದ ಆ ಛಲದಂಕವಲ್ಲ. ರಮಾ ಅಲ್ಲೇ ಸಂಭಾಷಣೆಗೆ ಸಾಕ್ಷಿಯಾಗಿ ಕುಳಿತವರು ನನ್ನತ್ತ, ಅವನತ್ತ ಮಿಂಚಿನ ವೇಗದಲ್ಲಿ ಕಣ್ಣು ಹಾಯಿಸುತ್ತಿದ್ದರು. ನನ್ನಲ್ಲಿ ಮೂಡಿದ ಪ್ರಶ್ನೆ ತಡೆಹಿಡಿದೆ 'ನಮ್ಮ ಮುಂದೆ ಹುಂಡಿಗೆ 900 ರೂ. ಹಾಕ್ತೀರಾ?' ಅನ್ನೋದು. ನನ್ನ ಈ ಚೌಕಾಸಿ ಅವನಿಗೆ ಸರಿ ಬಂದ ಹಾಗೆ ಕಾಣೆ ಆ ಲಕ್ಷ್ಮಿಯನ್ನು ಅಂಗೈಲಿ ಹಿಡಿದು ಮರೆಯಾಗೇಬಿಟ್ಟ. ಯಜಮಾನರ ನಾಯಕತ್ವದಲ್ಲಿ ತಂಡ ದರ್ಶನ ಮುಗಿಸಿ ಹೊರ ಬಂದಿರಬಹುದೆಂದು ದೇವಸ್ಥಾನಕ್ಕೆ ಮರಳಿದೆವು. ದಾರಿಯಲ್ಲಿ ರಮಾ 'ಶುದ್ಧ ಮೊಸಾರೀ, ನೀವು ಸರಿಯಾಗಿ ಕೇಳಿದಿರಿ, ಅಲ್ಲಾ ನಾಮದ ದೇವರಿಗೂ ನಾಮ ಹಾಕ್ತಾರಲ್ಲ, ಭಯ ಭಕ್ತಿ ಎಂತಾದ್ದು ಇಲ್ಲ, ಬರೀ ಹೊಟ್ಟೆಪಾಡು' ಎಂದು ಪೇಚಾಡಿಕೊಂಡರು. ನಾನು ಸಮಜಾಯಿಶಿ ನೀಡಿದೆ. 'ಅಲ್ಲಾ ರಮಾ, ನಿಜವಾಗಲು ದೇವ್ರಿಗೆ ತಲುಪತ್ತೆ ಅಂದರೆ 1000 ರೂಪಾಯಿ ಕೊಡೋಕೆ ನಾನು ಹಿಂದೂ ಮುಂದು ನೋಡ್ತಿರಲಿಲ್ಲ. ಆಗಲೇ ಮಧ್ಯಾಹ್ನ 2 ಗಂಟೆ ಸಮಯ, ಮೂರು ಗಂಟೆಗೆ ಅರ್ಚನಾಳ ಸಂಗೀತ ಕಾರ್ಯಕ್ರಮ. ನಮ್ಮ ದರ್ಶನಾಕಾಂಕ್ಷಿಗಳ್ಯಾರೂ ಹೊರ ಬಂದ ಸೂಚನೆಯೇ ಕಾಣಲಿಲ್ಲ. ಅಷ್ಟರಲ್ಲಿ ರಮಾ ಅವರ ತಳಮಳ ಹೆಚ್ಚಾಯಿತು. 'ಅರ್ಚನಾ ಬೆಳಿಗ್ಗೆ ತಿಂಡೀನೂ ತಿಂದಿಲ್ಲ. ಒಳಗೆ ಸಿಕ್ಕಿ ಹಾಕ್ಕೊಂಡುಬಿಟ್ಟಿದಾರೆ. ಈಗೇನು ಮಾಡೋದು?'

ರಮಾಗೆ ಸೆರೆ ಹಾಕಿ ಬಂದ ಪತಿ ವಿಜಯ ಫೋನ್ ಮಾಡಿ ತರಾಟೆಗೆ ತೆಗೆದುಕೊಂಡರು 'ನಿನಗೆ ಹೊತ್ತು ಗೊತ್ತು ಒಂದು ಇಲ್ವಾ ನಾನು ಮಲಗಿರೋದೇ ನಿನಗೆ ಅನುಕೂಲ ಆಯಿತಾ ಹೇಗೆ? ಒಂದು ತೊಟ್ಟು ನೀರಿಲ್ಲ ಕುಡಿಯೋಕೆ ಒಳಗೆ ಬಾಯಾರಿಕೆ. ಬೇಗಬಾ. ನೀರು ತೆಗೊಂಡೇ ಬಾ'. ಪತಿಯ ಗರ್ಜನೆಗೆ ಕಂಗಾಲಾದ ರಮಾ ರೂಮಿಗೆ ನನ್ನನ್ನು ಎಳೆದುಕೊಂಡೇ

ಓಡಿದರು ಒಂದು ನೀರಿನ ಬಾಟಲ್ ಕೊಂಡು. ಅವರ ದಾಹ ತುಸು ತಣಿದ ಮೇಲೆ ಅರುಹಿದರು 'ಅರ್ಚನಾ, ದೇವರನ್ನು ನೋಡಿ ಬರೋಕೆ ಇವರ ಮಕ್ಕಳ ಜೊತೇಲಿ ಹೋದವಳು ಹೊರಕ್ಕೆ ಬಂದಿಲ್ಲ. 3 ಗಂಟೆಗೆ ಕಚೇರಿ. ಹೊಟ್ಟೆಗೂ ಏನೂ ತಿಂದಿಲ್ಲ ಅವಳು'

ದಿಗ್ಗನೆದ್ದ ವಿಜಯ, ಇಡ್ಲಿ ಪ್ಯಾಕ್ ಪಾರ್ಸಲ್ ತಂದು ದೇವಸ್ಥಾನದ ಎದುರು ಹಸಿದ ಮಗಳ ಬರವಿಗಾಗಿ ಕಾದರೆ ಸರಿಯಾಗಿ ಹೊರ ಬಂದ ಅರ್ಚನಾ 'ಅಪ್ಪಾ ಇದೆಲ್ಲಾ ಏನು ಬೇಡ, ಒಂದು ಗಂಟೆ ಕಚೇರಿ, ಆಮೇಲೆ ತಿಂದರಾಯ್ತು' ಎಂದು ವೇದಿಕೆ ಹತ್ತಿಯೇಬಿಟ್ಟಳು. 'ತಂಬೂರಿ ಮಿಡಿದವಳ್, ಹಸಿವನ್ನು ದಾಟಿದವಳ್' ಎನಿಸಿತು.

ವಿವಾಹವಾಗಿ ಅಮೆರಿಕಾದಲ್ಲಿ ನೆಲೆಸಿರುವ ಅರ್ಚನಾ ಈಗಲೂ 'ಆಂಟಿ ಗಂಧದ ಲಕ್ಷ್ಮಿ ಬಂದಳಾ ನಿಮ್ಮನೆಗೆ' ಎಂದು ಕೇಳುತ್ತಿರುತ್ತಾಳೆ. 'ಲಕ್ಷ್ಮಿ ಯಾರಿಗೆ ಬೇಡಾಮ್ಮಾ ಪುರಂದರದಾಸರೇ ಅಷ್ಟು ಪ್ರೀತಿಯಿಂದ ಭಾಗ್ಯದ ಲಕ್ಷ್ಮಿ ಬಾರಮ್ಮಾ ಎಂದು ಹಾಡಿದ ಮೇಲೆ ನಮ್ಮಂತಹ ಪಾಮರರು ಅವಳ ದಾಸರಾಗೋದ್ರಲ್ಲಿ ಅತಿಶಯ ಏನಿದೆ?'

ಎಂದು ನಾನು ನಕ್ಕು ಮಾತು ಹಾರಿಸುವಾಗ ವೆಬ್ ಕ್ಯಾಮರಾ ಈ ನಗು, ಚೇಷ್ಟೆ ಮಾತನ್ನು ಸೆರೆಹಿಡಿಯುತ್ತದೆ.





ಹುರುಳಿ ಕಟ್ಟು

# ಭಾಗ್ಯ ಎಲ್ಲಿ.....

- ಎಚ್. ಗೋಪಾಲಕೃಷ್ಣ

ಒಂದು ದಿವಸ ವಾಕಿಂಗ್ ಹೋಗುತ್ತಿದ್ದೆ. ಮನೆಯಿಂದ ಒಂದೆರೆಡು ಕಿಲೋಮೀಟರು ದೂರ ಬಂದಿರಬಹುದು. ಎದುರಿಗೆ ಮುಖದಲ್ಲಿ ಗಾಬರಿ, ದುಗುಡ ತುಂಬಿದ್ದ 20-25ರ ಹುಡುಗ ಎದುರಿಗೆ ಬಂದು ನಿಂತುಕೊಂಡಿತು. ಏನು ಎನ್ನುವಂತೆ ಮುಖ ನೋಡಿದೆ. ಇದು ಯಾವ ಏರಿಯಾ? ಹುಡುಗ ಪ್ರಶ್ನೆ ಕೇಳಿದ. ಏರಿಯಾ ಹೆಸರು ಹೇಳಿದೆ. ಎಲ್ಲಿಗೆ ಹೋಗಬೇಕಿತ್ತು? ಅಂದೆ.

ವಿದ್ಯಾರಣ್ಯಪುರ ಹೋಗಬೇಕು ದಾರಿ ಗೊತ್ತಿಲ್ಲ....

ಸರಿ ಬಾ ನಾನೂ ಅಲ್ಲಿಗೇ ಹೋಗ್ತಿದೀನಿ...

ಹುಡುಗನಿಗೆ ಗಾಬರಿ ಒಂದೇ ಅಲ್ಲ ಸ್ವಲ್ಪ ಬುದ್ಧೀನೂ ಕಡಿಮೆ ಅನಿಸಿತು. ಅವನ ಹತ್ತಿರ ಮಾತು ಆಡಿಕೊಂಡು ಹೊರಟಾಗ ಸ್ಲೋ ಲರ್ನರ್ಸು ಅಂತೀವಿ ನೋಡಿ - ಅಂದರೆ ಮೆಂಟಲಿ ರಿಟಾರ್ಡೆಡ್ ಮಕ್ಕಳ ಗುಂಪಿಗೆ ಸೇರಿಸಬಹುದಾದ - ಸೇರಿದ ಹುಡುಗ ಅದು. ಒಂದು ಸ್ವಲ್ಪ ಓದು ಬರಹ ಬಂದ ಕೂಡಲೇ ಮನೆಯವರು ಎಲ್ಲಿಗೋ ಕೆಲಸಕ್ಕೆ ಹಾಕಿದಾರೆ ಅಂತ ಅವನ ಮಾತಿನಿಂದ ತಿಳೀತು.

ಪ್ರತಿ ದಿವಸ ವಿದ್ಯಾರಣ್ಯಪುರದ ಕೊನೇ ಸ್ಟಾಪಿನಲ್ಲಿ ಇಳಿಯೋದು ಅಲ್ಲಿಂದ ಮನೆ ಸೇರೋದೂ ಮಾಡುತ್ತಾನೆ ಅಂತ ತಿಳಿದುಕೊಂಡೆ. ಹುಡುಗ ಮಿಕ್ಕ ಹಾಗೆ ಅಂತಹ ಹುಷಾರಿನವನು ಅಲ್ಲ, ಕೊನೇ ಸ್ಟಾಪಿನಿಂದ ಮನೆ ದಾರಿ ಗೊತ್ತಿದೆ ಅಷ್ಟೇ. ದಾರಿಯುದ್ದಕ್ಕೂ ಅವನದೇ ಕತೆ ಹೇಳಿಕೊಂಡು ಬಂದ.

ಆಗಾಗ್ಗೆ ನನ್ನ ವಿಷಯವೂ ಕೇಳಿದ, ಅದು ಎಷ್ಟು ತಲೆಯೊಳಗೆ ಹೋಯಿತೋ ತಿಳೀಲಿಲ್ಲ, ಮನೆ ಹತ್ತಿರ ಬಂದ ಹಾಗೆ ಇನ್ನು ಸಾಕು ಅಂಕಲ್ ಅಂತ ಹೇಳಿ ಓಡಿಯೂ ಬಿಟ್ಟ. ಇಷ್ಟೇ ಆಗಿದ್ದರೆ ಈ ಹುಡುಗ ನನ್ನ ಮನಸ್ಸಿನಿಂದ ಯಾವತ್ತೋ ಮರೆಯಾಗುತ್ತಿದ್ದನೇನೋ.....

ಆದರೆ ಹಾಗಾಗಲಿಲ್ಲ, ಒಂದೆರೆಡು ವಾರದ ನಂತರ ಅದೇ ವಿದ್ಯಾರಣ್ಯಪುರದ ಮತ್ತೊಂದು ತುದೀನಲ್ಲಿ ಇವನು ಸಿಗಬೇಕೆ?

ಅಂಕಲ್ ಅವತ್ತು ನೀವೇ ಅಲ್ಲವಾ ನನಗೆ ದಾರಿ ತೋರಿಸಿದ್ದು? ಅಂತ ಕೇಳಿದ. ಪರವಾಗಿಲ್ಲ ಹುಡುಗನಿಗೆ ನೆನಪಿನ ಶಕ್ತಿ ಚೆನ್ನಾಗಿದೆ ಅನಿಸಿತು.

ಹೌದು ಎಲ್ಲಿ ನಿಮ್ಮ ಮನೆ? ನೀನು ಕರೆದುಕೊಂಡೇ ಹೋಗಿಲ್ಲ... ಅಂದೆ.

ಅಂಕಲ್ ಬನ್ನಿ ಒಂದು ದಿವಸ ಹೋಗೋಣ ನಮ್ಮ ಮನೆಗೆ... ಅಂದ.

ಭಾಗ್ಯ ಹೇಗಿದಾರೆ? ಅಂತ ಕೇಳಿದ.

ಯಾವ ಭಾಗ್ಯ? ಅಂದೆ.

ಅದೇ ಅವತ್ತು ನಿಮ್ಮ ಜತೇಲಿ ಇದ್ರಲ್ಲಾ?

ನನ್ನ ಜತೇಲಿ ಯಾವ ಭಾಗ್ಯ ಇದ್ದರೋ ಅವತ್ತು ನಾನು ನಿನಗೆ ಸಿಕ್ಕಿದಾಗ ಒಬ್ಬನೇ ಇದ್ದದ್ದು.... .

ಹುಡುಗ ನನ್ನ ಮಾತು ಕೇಳಿಸಿಕೊಳ್ಳಲೇ ಇಲ್ಲ. ಅವತ್ತು ಪೂರ್ತಿ ಭಾಗ್ಯ ಎಲ್ಲಿದ್ದಾರೆ ಅಂತಲೇ ಅವನ ಮಾತು!

ಮತ್ತೊಂದು ಹದಿನೈದು ದಿವಸ ಬಿಟ್ಟು ಸಿಕ್ಕಿದಾಗಲೂ ಭಾಗ್ಯ ಹೇಗಿದಾರೆ ಅಂತಲೇ ಕೇಳಿದ.

ಯಾವಾಗ ನನ್ನ ಮುಖ ನೋಡಿದರೂ ಭಾಗ್ಯ ಎಲ್ಲಿ ಭಾಗ್ಯ ಹೇಗಿದಾರೆ... ಇದೇ ಜಪ ಆಗಿಹೋಯಿತು ಅವನದ್ದು!

ಸುಮಾರು ಸಲ ಈ ಅನುಭವ ಆದ ನಂತರ ಆ ಹುಡುಗ ಮತ್ತೊಂದು ಸಲ ಸಿಕ್ಕಿದಾಗ ಭಾಗ್ಯ ಊರಿಗೆ ಹೋಗಿದಾಳೆ.... ಅಂದೆ.

ಅವತ್ತಿನಿಂದ ಭಾಗ್ಯ ಊರಿಗೆ ಬಂದರಾ – ಅಂತ ಶುರುವಾಯಿತು.

ಇವನ ತಲೆಯಿಂದ ಭಾಗ್ಯನ್ನ ಹೇಗೆ ಓಡಿಸೋದು ಅಂತ ಚಿಂತೆ ನನಗೆ ಹತ್ತಿಕೋಬೇಕೇ?

ಒಂದುಪಾಯ ಮಾಡಿದೆ. ಇನ್ನೊಂದು ಸಲ ಹುಡುಗ ಸಿಕ್ಕಿ ಭಾಗ್ಯ ಎಲ್ಲಿ ಅಂದಾಗ ಭಾಗ್ಯ ಕಳೆದು ಹೋದಳು ಅಂತ ಒಂದು ಸುಳ್ಳು ಬಿಟ್ಟೆ!

ಭಾಗ್ಯ ಕಳೆದು ಹೋದರೆ ಸುಮ್ಮನಿದೀರಾ? ಪೋಲೀಸ್ ಸ್ಟೇಷನ್‌ಗೆ ಕಂಪ್ಲೇಂಟ್ ಕೊಡಿ ಅಂಥ ನನಗೆ ಸಲಹೆ ಕೊಟ್ಟ!

ಭಾಗ್ಯನ ಪ್ರಾಬ್ಲಮ್ಮು ಎದುರಿಸಲು ಆಗದೇ ಹುಡುಗ ದೂರದಲ್ಲಿ ಕಾಣಿಸಿದರೂ ಪಕ್ಕದ ಗಲ್ಲೀಗೆ ನುಗ್ಗಬೇಕು ಅನಿಸಲು ಶುರುವಾಯಿತು.

ಈ ಪ್ರಸಂಗ ನಡೀತಿರಬೇಕಾದರೇನೇ ಒಂದು ದಿವಸ ಆ ಹುಡುಗನ ಅಮ್ಮ ಪರಿಚಯವಾದರು.

ಹೀಗೆ ಭಾಗ್ಯ ಎಲ್ಲೀ ಅಂತ ನಿಮ್ಮ ಮಗ ಸಿಕ್ಕಿದಾಗಲೆಲ್ಲಾ ಕೇಳ್ತಾನೆ... ಅಂತ ವಿವರಿಸಿದೆ.

ಇವನಿಗೆ ಅಕ್ಕ ಭಾಗ್ಯ ಅಂತ ಇದ್ದಳು. ಇವನಿಗೆ ಏಳೆಂಟು ವರ್ಷ ಆಗಿರಬೇಕಾದರೆ ಆ ಮಗು ಟೈಫಾಯ್ಡ್ ಬಂದು ಹೋಗಿಬಿಟ್ತು.

ಅವಾಗಲಿಂದ ಯಾರು ಸಿಕ್ಕಿದರೂ ಹೀಗೆ ಕೇಳ್ತಾನೇ ಇರ್ತಾನೆ... ಅಂತ ಅವರಮ್ಮ ಕಣ್ಣು ಒರೆಸಿಕೊಂಡರು.

ಪಾಪ ಅವರಮ್ಮನಿಗೇ ಭಾಗ್ಯ ಇಲ್ಲ ಅಂತ ಹೇಳಲು ಆಗಿಲ್ಲ, ನಾನು ಹೇಗೆ ಹೇಳಲಿ? ಪಾಪ ಬುದ್ಧಿ ಮಾಂದ್ಯ ಹುಡುಗನ ಸಂಗಡ ಈ ಚೋದ್ಯ ಮಾಡಬಾರದಾಗಿತ್ತು ಅಂತ ಸುಮಾರು ದಿವಸ ಪೇಚಾಡಿಕೊಂಡಿದೀನಿ. ಈಗಲೂ ಆ ಹುಡುಗ ಸಿಕ್ಕಿದರೆ ಭಾಗ್ಯನ ಸಂಗತಿ ಬರುವರೆಗೆ ಅವನ ಹತ್ತಿರ ಮಾತು ಆಡ್ತೀನಿ, ನಂತರ ತಪ್ಪಿಸಿಕೊಂಡು ಓಡ್ತೀನಿ....!



---

**ಬೇರಿನೊಡನೆ ಚಿಗುರಿಗೆ ನಿರಂತರ ಸಂಬಂಧ**
**ಮರಗಡಗಳಲ್ಲಿ**
**ಬಲಿತೊಡನೆ ಬೇರಿನ ಸಂಬಂಧ ಕಳಚುವುದು**
**ಮನುಷ್ಯರಲ್ಲಿ**

**ಪ್ರಾಣಿಗಳಿಂದ ಮನುಷ್ಯ**
**ಕಲಿಯಬೇಕಾದ್ದು**
**ಬೇಕಾದಷ್ಟಿದೆ**
**ಆದರೆ ಮನುಷ್ಯನಿಂದ**
**ಪ್ರಾಣಿಗಳು ಕಲಿಯಬೇಕಾದ್ದು ಒಂದೇ**
**ನಾವು ಅವನಂತಾಗಬಾರದು**

**ಮದುವೆಯ ಹೊಸದರಲ್ಲಿ**
**ಕೇಳುತ್ತಿದ್ದ**
**ಏನು ಬೇಕು ಏನು ಬೇಕು**
**ಈಗ ಒಂದೇ ರಾಗ**
**ನೀನು ಸುಮ್ಮನಿರಬೇಕು**

**- ಬೇಲೂರು ರಾಮಮೂರ್ತಿ**

## ಅಭಿನಂದನೆಗಳೊಂದಿಗೆ



# ಅಪರಂಜಿಯ ಅಭಿಮಾನಿ

